# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K R.N.N. 240 ಸಂಪುಟ : 1 ಸಂಚಿಕೆ : 7 ಜುಲೈ 1 ರಿಂದ 15–1997 ಪುಟಗಳು : 24 ರೂ. 5

ಕಷ್ಟಕಾರ್ಪಣ್ಯದ ನಡುವೆಯೂ ಸಹ ಅರೆಭಾಷಿಕ ಜನಾಂಗದ ಶ್ರೇಯೋಭಿವೃದ್ಧಿಗಾಗಿ
ತನ್ನನ್ನು ಅರ್ಪಿಸಿ ಹಗಲಿರುಳು ಸದಾ ದುಡಿಯುತ್ತಿರುವ ಮೇರು ವ್ಯಕ್ತಿ
ಶ್ರೀ ಪೂಜಾರಿ ಅಚ್ಚಯ್ಯ ಮೊಣ್ಣಪ್ಪ (ಲೇಖನ ಒಳಪುಟದಲ್ಲಿ)

ನಾನು, ನನ್ನದು ಎನ್ನುವುದಕ್ಕಿಂತ ನಾವು, ನಮ್ಮವರು ಎಂದು ಹೇಳುವುದರಲ್ಲಿ ಜನಶಕ್ತಿ, ಸಂಘಟನೆ ಆಗುವುದೆಂದು ಭಾವಿಸಿ ನಮ್ಮ ಜನಾಂಗದ

**"ಕೊಡಗು ಸಂಗಾತಿ" ಗೆ**

ಯುವ ಶಕ್ತಿಯನ್ನು ಸಂಘಟಿಸಿ, ಐಕ್ಯತೆಗೆ ಸದಾ ಹೋರಾಡುವ ಚೈತನ್ಯವನ್ನು ಕುಲದೇವರೂ ಮಾತೆ ಕಾವೇರಿಯೂ ಕರುಣಿಸಲೆಂದು ಹಾರೈಸುವ,

**ಮೂಟೇರ ಎನ್. ಹರೀಶ್**

**ಮೂಟೇರ ಶ್ರೀಮತಿ ಹರೀಶ್ ಬೀನಾ**

**ಮೆ|| ಹರೀಶ್ ಸರ್ವೀಸ್ ಸ್ಟೇಷನ್**

**ಕು ಶಾ ಲ ನ ಗ ರ.**

---

ಪ್ರಿಯ ಓದುಗರಲ್ಲಿ ವಿನಂತಿ,

ತಾವುಗಳು ಡಿ.ಡಿ./ಚೆಕ್ ಕಳುಹಿಸುವುದಕ್ಕಿಂತಲೂ, ಮನಿ ಆರ್ಡರ್ ಮೂಲಕ ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ಕೋರುತ್ತೇವೆ.

**ಪಿ. ಪಿ. ಶೀಲಾಮಣಿ**

ಸಂಪಾದಕಿ, ಕೊಡಗು ಸಂಗಾತಿ,
322, ಬೋಗಾದಿ ಸರ್ಕಲ್, ಹಿನಕಲ್ ಅಂಚೆ,
ಮೈಸೂರು - 570 017

"ಕೊಡಗು ಸಂಗಾತಿ" ಪತ್ರಿಕೆಗೆ ಚಂದಾದಾರರಾಗುವವರು ಮತ್ತು ಇತರೆ ವಿವರಗಳಿಗೆ ಮಡಿಕೇರಿಯ ಈ ನಮ್ಮ ಕಛೇರಿಯಲ್ಲಿ ವ್ಯವಹರಿಸಬಹುದು.

ವಿಳಾಸ :

**ಶ್ರೀಮತಿ ಜಾನಕಿ ಬೆಳ್ಯಪ್ಪ**

**W/o ಬೈತಡ್ಕ ಅಯ್ಯಪ್ಪ ಬೆಳ್ಯಪ್ಪ,**

ಮನೆ ನಂ. 21-16, ವೆಬ್ಸ್ ಹತ್ತಿರ, (LIC)

**ಮ ಡಿ ಕೇ ರಿ.**

ದೂರವಾಣಿ ಸಂಖ್ಯೆ : 08272-28047

---

ಕೊಡಗು ಗೌಡ ಜನಾಂಗದ ಪತ್ರಿಕೆಯಾಗಿ ಹುಟ್ಟಿದ್ದ ಈ ಹಿಂದಿನ ಎರಡು ಮಕ್ಕಳನ್ನು ಕಳೆದು ಕೊಂಡಿದ್ದ ದುಃಖದಲ್ಲಿದ್ದಾಗಲೇ ಈ ಮೂರನೆಯ ಮಗು **"ಕೊಡಗು ಸಂಗಾತಿ"** ಅನಿವಾರ್ಯವಾಗಿ ಅತೀ ಪ್ರಾಯಾಸದಿಂದ ಜನಿಸಿ ಮೂರು ತಿಂಗಳಾಗಿದೆ. ಇವನ್ನು ಅತೀ ಸೂಕ್ಷ್ಮತೆಯಿಂದ ಬೆಳೆಸಿ ಪೋಷಿಸು ವುದು ಜನಾಂಗಕ್ಕೂ ಮತ್ತು ಓದುವ ಮಹಾ ಜನತೆಗೂ ಸೇರಿದ್ದಾಗಿದೆ. ಇದರ ಪ್ರತಿಫಲವನ್ನು ಸರ್ವರು ಸಮರ್ಥವಾಗಿ ಬಳಸಿಕೊಂಡಾಂಗ ಮಾತ್ರವೇ ಈ ಸಂಗಾತಿ ಬಳಗಕ್ಕೆ ನೆಮ್ಮದಿ, ತೃಪ್ತಿ.

**— ಕೊಡಗು ಸಂಗಾತಿ ಬಳಗ**



# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :

**ಪಟ್ಟಡ ಪಿ. ಶೀಲಾಮಣಿ**

ಉಪ ಸಂಪಾದಕ :

**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :

**ಹುಲಿಮನೆ ಓ. ರಮೇಶ್**

ಪ್ರಸಾರ ವ್ಯವಸ್ಥಾಪಕ :

**ಪಟ್ಟಡ ಎಲ್. ಶಿವಕುಮಾರ್**

ಕಛೇರಿ ನಿರ್ವಹಣೆ :

**ಪಟ್ಟಡ ಪಿ. ದೀಪಕ್**

**ಹೊಸೊಕ್ಲು ಹರಿಣಿ ಬೆಳ್ಯಪ್ಪ**

**ಮುಂಜ್ಞಾಪುರ ಧರಣಿ ಗಣಪತಿ**

ಮುದ್ರಣ :

**ಮುಂಜ್ಞಾಂಡ್ರ ಕೆ. ತಮ್ಮಯ್ಯ**

**ಆಶೀರ್ವಾದ್ ಪ್ರಿಂಟರ್ಸ್,**

ವಿನಾಯಕನಗರ, ಮೈಸೂರು-12

ಗೌರವ ವ್ಯವಸ್ಥಾಪಕ :

**ಪಟ್ಟಡ ಎಂ. ಪ್ರಭಾಕರ್**

ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**

ನಂ. 322, ಭೋಗಾದಿ ಸರ್ಕಲ್,

ಹಿನಕಲ್ ಪೋಸ್ಟ್, ಮೈಸೂರು–17


## ಒಳನೋಟ

ಪುಟಗಳು



## ಅರೆ ಭಾಷಿಕ ವಿಭಾಗ




### ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ :-

ಗುರುದೇವೋಭವ, ಮಾತೃದೇವೋಭವ ಎನ್ನುವ ಪದಗಳು ನಮ್ಮಲ್ಲಿ ಜನಜನಿತ. ಆದರೆ ನಮ್ಮ ಕೊಡಗು ನಾಡಿನಲ್ಲಿ ಗುರು ಪೀಠಗಳ ಕೊರತೆಯಿದೆ. ಇದನ್ನು ತುಂಬಲು ನಮಗೆ ಉತ್ತಮ ಅವಕಾಶವಿದ್ದರೂ ವನ ಸಿರಿಯ ಮಡಿಲಲ್ಲಿ ಇದಕ್ಕೆ ಹೆಚ್ಚಿಗೆ ಪ್ರಾಮುಖ್ಯತೆ ಕೊಟ್ಟಂತಿಲ್ಲ. ತಲಕಾವೇರಿಯಲ್ಲಿ ಅಥವಾ ಭಾಗಮಂಡಲ ದಲ್ಲಿ ಪೂರ್ವದ ನಮ್ಮ ಶೃಂಗೇರಿ ಮಠ ಅಥವಾ ಆದಿ ಚುಂಚನಗಿರಿ ಮಠಗಳ ಗುರುಪೀಠಗಳು ಸ್ಥಾಪನೆಯಾದರೆ ಅದರಿಂದ ನೆಮ್ಮದಿ, ಸಂಸ್ಕೃತಿ ಉಳಿದೀತು. ಗುರು ಆಶೀರ್ವಾದ, ಹಿತವಚನಗಳು ಮಾನವನ ಬದು ಕನ್ನು ಬದಲಿಸಬಲ್ಲವು. ಶ್ಲೋಕಗಳನ್ನು ಪಠಿಸುವ ನಿನಾದ ಗಾಳಿಯಲ್ಲಿ ತೇಲಿ ಬಂದಾಗ ಅದರಿಂದ ಮನಸ್ಸು ಹಗುರವಾಗಿ ಸಂತೋಷ ನೀಡಬಲ್ಲದು.

ಮಾನವ ಜೀವನದಲ್ಲಿ ಎಲ್ಲಾ ಹಂತಗಳನ್ನು ಕಳೆದು ವೃದ್ಧಾಪ್ಯಕ್ಕೆ ಬಂದಾಗ ಅವನಿಗೊಂದು ಆಸರೆ ಅಗತ್ಯ. ಈ ಆಸರೆಯನ್ನು ಯಾರು ನೀಡಬ ಲ್ಲರು ? ತಮ್ಮ ಸ್ವಂತ ಮಕ್ಕಳಿಂದ ಸಾಧ್ಯವಾಗದೆ ಹೋದಾಗ ಅವರು ವೃದ್ಧಾಶ್ರಮಕ್ಕೆ ಸೇರ ಬಯಸು ತ್ತಾರೆ. ವಯಸ್ಸಾದ ದಿಕ್ಕಿಲ್ಲದ ಹಿರಿಯರು ಮುಪ್ಪಿನಲ್ಲಿ ಅವರ ಕ್ಷೇಮಕ್ಕಾಗಿ ವೃದ್ಧಾಶ್ರಮದ ಮತ್ತು ಅನಾಥಾಶ್ರಮದ ಅವಶ್ಯ ಕುರಿತು ಚಿಂತನೆ ಅಗತ್ಯ. ಇದಕ್ಕಾಗಿ ಮಡಿಕೇರಿ ಅಥವಾ ಸುಳ್ಯಾದಲ್ಲಿ ಆಶ್ರಮಗಳ ಸ್ಥಾಪನೆ ಸಾಧ್ಯ. ಈ ಬಗ್ಗೆ ಸಮಾಜ ಚಿಂತಿ ಸಬೇಕಾದುದು ಇಂದಿನ ತುರ್ತಾಗತ್ಯವಾಗಿದೆ.

## ಏಡ್ಸ್ - ತಿಳುವಳಿಕೆ ಅಗತ್ಯ

ಏಡ್ಸ್‌ನ ಬಗ್ಗೆ ನಿರಾಧಾರವಾದ ಹಲವಾರು ಕಲ್ಪನೆಗಳು ಹುಟ್ಟಿಕೊಂಡಿದ್ದು, ನೀವು ಭಯಭೀತರಾಗಿರಬಹುದು. ಆದ್ದ ರಿಂದಲೇ, ನೀವು ಎಚ್‌ಐವಿ/ಏಡ್ಸ್, ಆದವರಿಂದ ದೂರವಿರು ತ್ತೀರಿ. ಆದರೆ, ಎಚ್‌ಐವಿ/ಏಡ್ಸ್, ಬರೀ ಮೈ ಮುಟ್ಟುವು ದರಿಂದ, ಹಗುರವಾದ ಮುದ್ದು-ಮುತ್ತು ಕೊಡುವುದರಿಂದ, ಕೈ ಕುಲುಕುವುದರಿಂದ, ಸಾರ್ವಜನಿಕ ಸ್ಥಳಗಳಲ್ಲಿನ ನೂಕು ನುಗ್ಗಲಿನಿಂದ, ಏಡ್ಸ್ ಆದ ವ್ಯಕ್ತಿ ಮಾಡಿದ ಅಡಿಗೆ ಉಣ್ಣು ವುದರಿಂದ, ಪಾತ್ರೆ-ಪಡಗ, ಬಟ್ಟೆ-ಬರೆ ಬಳಸುವುದರಿಂದ ಹರ ಡದು. ಲೈಂಗಿಕ ಸಂಬಂಧವಿಲ್ಲದೆ ಈ ರೋಗ ಹರಡದು. ಸೊಳ್ಳೆ ಕಡಿಯುವುದರಿಂದಲೂ ಏಡ್ಸ್ ಹರಡದು. ಆದ್ದರಿಂದ ಎಚ್‌ಐವಿ/ಏಡ್ಸ್ ಇರುವ ವ್ಯಕ್ತಿಯೊಡನೆ ನೀವು ಕಲೆತು ಇರ ಬಹುದು. ಅವರೊಡನೆ ಸ್ನೇಹ ಹಂಚಿಕೊಳ್ಳಬಹುದು.

ಏಡ್ಸ್ ನಿಮಗೆ ಕೇವಲ ನಾಲ್ಕು ಕಾರಣಗಳಿಂದ ಆಗ ಬಹುದು : 1. ಏಡ್ಸ್, ಸುರಕ್ಷಿತವಲ್ಲದ ಲೈಂಗಿಕ ಸಂಬಂಧ ಗಳಿಂದ ಹರಡುತ್ತದೆ. ಒಬ್ಬರಿಗಿಂತ ಹೆಚ್ಚು ಜನರೊಡನೆ ಲೈಂಗಿಕ ಸಂಬಂಧ ಇಟ್ಟುಕೊಳ್ಳಬೇಡಿ ಅಥವಾ ಕಾಂಡೊಮ್ ಬಳಸಿ.

2. ಎಚ್‌ಐವಿ ಯಿಂದ ದೂಷಿತವಾದ ರಕ್ತ ಪಡೆದಲ್ಲಿ, ಅದರ ಸೋಂಕು ತಟ್ಟುತ್ತದೆ. ಆದ್ದರಿಂದ ಎಚ್‌ಐವಿ ಮುಕ್ತವಾದ ರಕ್ತವನ್ನಷ್ಟೇ ಪಡೆಯಿರಿ.

3. ದೂಷಿತ ಸೂಜಿ ಮತ್ತು ಸಿರಿಂಜ್‌ಗಳನ್ನು ಬಳಸಿದಾಗಲೂ ಸೋಂಕು ತಟ್ಟುವ ಅಪಾಯ ಇರುತ್ತದೆ. ಒಬ್ಬರು ಬಳಸಿದ ಸೂಜಿ, ಸಿರಿಂಜ್ ಬಳಸಬೇಡಿ. ಸದಾಸರ್ವದಾ ಸ್ಟೆರಿಲೈಜ್ ಮಾಡಲಾದ, ಇಲ್ಲವೆ, ಬಳಸಿ ಬಿಸುಟಬಹುದಾದ ಸೂಜಿ ಮತ್ತು ಸಿರಿಂಜ್‌ಗಳನ್ನಷ್ಟೇ ಬಳಸಿ.

4. ಸೋಂಕು ತಟ್ಟಿದ ತಾಯಿಯಿಂದ, ಭ್ರೂಣಕ್ಕೆ ರೋಗದ ನಂಜು ಹರಡುವ ಅಪಾಯವಿದೆ. ಹತ್ತರಲ್ಲಿ ಮೂರು ಮಕ್ಕಳು ಈ ರೀತಿ ಸೋಂಕು ಪಡೆಯಬಹುದು.

ಭೀತಿ ನಿಮ್ಮನ್ನು ಉಳಿಸಲಾರದು.
ಸಂರಕ್ಷಣೆ ಮಾತ್ರ ಉಳಿಸೀತು.

## ಕಲುಷಿತ ಸಮಾಜದಲ್ಲಿ 30 ವರ್ಷಗಳ ಅವಿರತ ಸೇವೆಯ ಭೀಷ್ಮ, ಸಮಾಜ ಸೇವೆಯೇ ದೇವರು ಎನ್ನುವ

# ಶ್ರೀ ಪೂಜಾರಿ ಅಚ್ಚಯ್ಯ ಮೊಣ್ಣಪ್ಪ, MA., DPMR., B.Ed., BL.

ಮಡಿಕೇರಿ ತಾಲ್ಲೂಕು, ಬಿಳಿಗೇರಿ ಗ್ರಾಮದ ಪೂಜಾರಿ ಅಚ್ಚಯ್ಯ ಮತ್ತು ಮುದ್ದವ್ವ ದಂಪತಿಗಳ ಮಗನಾಗಿ 1930 ರಲ್ಲಿ ಜನಿಸಿದರು. ಇವರು ಚಿಕ್ಕಂದಿನಿಂದಲೇ ಸಮಾಜ ಸೇವೆಯಲ್ಲಿ ತೊಡಗಿ ಇಂದು ಅದೇ ಸೇವೆಯಲ್ಲಿ ತೃಪ್ತಿ ಕಾಣುತ್ತಿರುವ ಮಹಾನ್ ವ್ಯಕ್ತಿಯಾಗಿದ್ದಾರೆ. ಇವರು ಅರಿಸಿಕೊಂಡ ಹಾದಿ, ಮುಳ್ಳಿನಂತಿದ್ದರೂ 30 ವರ್ಷಗಳ ಅನುಭವ ಅವರಲ್ಲಿ ತುಂಬಿ ತುಳುಕುತ್ತಿದೆ. 'ಕೊಡಗು ಸಂಗಾತಿ' ಅವರನ್ನು ಸಂದರ್ಶಿಸಿದಾಗ ಇಳಿವಯಸ್ಸಿನಲ್ಲಿಯು ಅವರ ಲವಲವಿಕೆಯನ್ನು ಕಂಡು ನಾವೆಲ್ಲಾ ಅತೀ ಚಿಕ್ಕವರಾಗಿ ಹೋದೆವು.

ಸಂಗಾತಿ : ನಿಮ್ಮ ವಿದ್ಯಾಭ್ಯಾಸ ತಿಳಿಸಿ ?

ಉ : ನಮ್ಮ ಚಿಕ್ಕಪ್ಪನವರಾದ ರಾಮಪ್ಪ ರಾಜಕೀಯ ಮುರೀಣರು. ಇವರು ಸ್ಥಾಪಿಸಿದ ರಾಷ್ಟ್ರೀಯ ವಿಧ್ಯಾಶಾಲೆ ಬಿಳಿಗೇರಿಯಲ್ಲಿ ನನ್ನ ವಿಧ್ಯಾಭ್ಯಾಸ ಪ್ರಾರಂಭವಾಯಿತು. ಹಂತ ಹಂತವಾಗಿ ಬೆಟ್ಟಗೇರಿ, ಮೂರ್ನಾಡು, ಮಡಿಕೇರಿ ಪ್ರೌಢಶಾಲೆ, ಇಲ್ಲಿ ಸೆಂಟ್ರಲ್ ಪ್ರೌಢಶಾಲೆ ಇಂಟರ್ ಮಿಡಿಯಟ್, ಸ್ವಲ್ಪ ಸಮಯದ ನಂತರ ಸೆಂಟ್ರಲ್ ಮಾರ್ಡ್‌ನ್ ಆಫ್ ಸೆಕೆಂಡರಿ ಎಜುಕೇಷನ್ ಅಜ್ಮೀರದಲ್ಲಿ, ಮಡಿಕೇರಿಯ ಸರಕಾರಿ ಕಾಲೇಜಿನಲ್ಲಿ ಬಿ.ಎ., ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡದಲ್ಲಿ ಎಂ.ಎ ಹಾಗೆ ಡಿ.ಪಿ.ಯು.ಆರ್, ಡಿಪ್ಲೊಮ, ಬಿ.ಎಡ್. ಹಾಗೂ ಬಿ. ಎಲ್. ಪದವಿಯನ್ನು ಬೆಂಗಳೂರಿನಲ್ಲಿ ಪಡೆದೆ. ಇದನ್ನೆಲ್ಲಾ ಮುಗಿಸುವಾಗ ನನಗೆ ಹಣದ ತೊಂದರೆ ಸಾಕಷ್ಟಿತ್ತು. ನನ್ನ ಸ್ವಪ್ರಯತ್ನ ಮತ್ತು ಇಚ್ಚೆಯಿಂದ ವಿದ್ಯಾಭ್ಯಾಸ ಮುಗಿಸಿದೆ.



ಪೂಜಾರಿ ಮೊಣ್ಣಪ್ಪನವರು, ವಕೀಲರು

**ಒಂದು ಜನಾಂಗದ ಜನರನ್ನು ಸಂಘಟಿಸುವುದೆಂದರೆ ಅಷ್ಟು ಸುಲಭ ಸಾಧ್ಯವಲ್ಲ. ಇದನ್ನು ಸಾಧಿಸುವಲ್ಲಿ ಬೆಂಗಳೂರಿನ ಗಂಗಾನಗರದಲ್ಲಿರುವ "ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ" ವನ್ನು ಇತರ ಸಂಘ ಸಂಸ್ಥೆಗಳಿಗೆ ಹೋಲಿಸಿದರೆ ವಿಭಿನ್ನಪಾತ್ರ ವಹಿಸಿರುವುದು ಕಾಣುತ್ತದೆ. ಎಲ್ಲಾ ಹಂತದಲ್ಲಿ ಜನಾಂಗದ ಹಿತವನ್ನು ಕಾಪಾಡುವಲ್ಲಿಯೂ ನಮ್ಮ ಸಂಸ್ಕೃತಿಯನ್ನು ಉಳಿಸುವಲ್ಲಿಯೂ ನಿರಂತರ ಹೋರಾಟದಲ್ಲಿ ತೊಡಗಿದೆ. ಇದಕ್ಕಾಗಿ ಅವಿಸ್ಮರಣೀಯ ಸೇವೆಯನ್ನು ಸಲ್ಲಿಸುತ್ತಿರುವ ಹಾಲಿ ಅಧ್ಯಕ್ಷರಾದ ಪೂಜಾರಿ ಅಚ್ಚಯ್ಯ ಮೊಣ್ಣಪ್ಪನವರ ವಿಚಾರ ಧಾರೆಯನ್ನು ಇಲ್ಲಿ ಇರಿಸಲಾಗಿದೆ.**

**-ಸಂ.**

ಸಂಗಾತಿ : ನೀವು ನಿಮ್ಮ ವಿದ್ಯಾಭ್ಯಾಸದ ಜೊತೆಗೆ ಸಮಾಜ ಸೇವೆಯಲ್ಲಿ ತೊಡಗಿದ್ದರೆ?

ಉತ್ತರ : ಹೌದು ನಾನು ಚಿಕ್ಕಂದಿನಿಂದಲೆ ಸಮಾಜ ಸೇವೆಗೆ ಧುಮುಕಿದೆ.

ಸಂಗಾತಿ : ನೀವು ಯಾವ ಹುದ್ದೆಗೆ ಮೊದಲು ಪಾದಾರ್ಪಣೆ ಮಾಡಿದ್ದೀರಿ ?

ಉತ್ತರ ; ಹಾಕತ್ತೂರಿನಲ್ಲಿ ಉಪಾಧ್ಯಾಯನಾಗಿಯೂ, ಹಾಗೂ ಪಶುವೈದ್ಯ ಇಲಾಖೆಯಲ್ಲಿಯೂ ನಂತರ ರೆವೆನ್ಯೂ ಇಲಾಖೆಯಲ್ಲಿಯೂ ಕೆಲವು ಸಮಯ

ಸಂದರ್ಶನ, ಲೇಖನ :
**ಕಟ್ರತನ ಜಯರಾಂ**

ಹೈಸ್ಕೂಲ್ ಉಪಧ್ಯಾಯನಾಗಿಯೂ ನಂತರ ಪದವಿಪೂರ್ವ ಕಾಲೇಜಿನಲ್ಲಿ ಉಪನ್ಯಾಸಕನಾಗಿಯೂ ಹಾಗೆ ಪಾರ್ಟ್‌ಟೈಮ್ ಉಪನ್ಯಾಸಕನಾಗಿಯೂ ನಂತರ ಬೆಂಗಳೂರಿನ ವಿವೇಕನಂದ ಲಾ ಕಾಲೇಜಿನಲ್ಲಿ ಪ್ರೊಫೆಸರ್‌ನಾಗಿ ದುಡಿದೆ. ನಾನು ಈಗ ಸ್ವತಂತ್ರ ನ್ಯಾಯವಾದಿಯಾಗಿ ಸ್ವಂತಮನೆಯಲ್ಲಿಯೇ ಕಛೇರಿಯನ್ನು ಹೊಂದಿದ್ದೇನೆ.

ಸಂಗಾತಿ : ಸಮಾಜ ಸೇವೆಗೆ ನೀವು ಯಾವಾಗ ಇಳಿದಿರಿ ?

ಉ : ಸುಮಾರು 1947 ರಿಂದಲೇ ನಾನು ಸಮಾಜ ಸೇವೆಗೆ ಇಳಿದೆ. ಈಗ 30 ವರ್ಷಗಳ ನಿರಂತರ ಸಮಾಜ ಸೇವೆಯಲ್ಲಿಯೇ ಮುಂದುವರಿಯುತ್ತಿದ್ದೇನೆ.

ಸಂಗಾತಿ : ನೀವು ಬೆಂಗಳೂರಿನ ಕೊಡಗು ಮತ್ತು ದ.ಕ. ಗೌಡ ಸಮಾಜದ ಸ್ಥಾಪಕರು ಎಂಬುದು ತಿಳಿಯಿತು, ಈ ನಿಟ್ಟಿನಲ್ಲಿ ನೀವೇನು ಹೇಳುತ್ತೀರ ?

ಉ : ಹೌದು, ನಾನು ನನ್ನ ಛಲದಿಂದಲೂ ಉತ್ತಮ ವಿಶಾಲ ಮನೋಭಾವನೆಯಿಂದಲೂ ಈ ಸಂಸ್ಥೆಯನ್ನು ಸ್ಥಾಪನೆಮಾಡಿದೆ. ಸಂಸ್ಥೆಯ ಸ್ಥಾಪನೆಗಾಗಿ ಪಡಬಾರದ ಪಾಡು ಪಡಬೇಕಾಯಿತು. ನಾನು ನನ್ನ ಬಳಗದವರು ಅಂದು ಸಾಕಷ್ಟು ಬೆವರು ಸುರಿಸಬೇಕಾಯಿತು. ಕಷ್ಟ ಪಟ್ಟರೆ ಫಲ ಉಂಟು ಎಂಬುದಕ್ಕೆ ಈ ಸಂಸ್ಥೆಯೇ ಸಾಕ್ಷಿ.

(ಮುಂದಿನ ಸಂಚಿಕೆಗೆ)

# ಕೊಡಗಿನ ಗೌಡ ಸಿಂಹಗಳೇ ಎಚ್ಚೆತ್ತು ಎದ್ದೇಳಿ !

ಕೊಡಗು ಬೆಡಗಿನ ನಾಡು, ಸೌಂದರ್ಯದ ನೆಲೆವೀಡು. ಕಾಫಿ, ಕಿತ್ತಳೆಯ ತವರೂರು. ಅಂತೆಯೇ ಕೊಡಗಿನ ಗೌಡರಾದ ನಮ್ಮ ಹೆಮ್ಮೆಯ ಪವಿತ್ರ ಜನ್ಮ ಭೂಮಿ ಅಂದ ಮೇಲೆ ಕೊಡಗಿನ ಗೌಡ ಜನಾಂಗದಲ್ಲಿ ಹುಟ್ಟಿರುವುದಕ್ಕೆ ನಾವೆಲ್ಲರೂ ಹೆಮ್ಮೆ ಪಡಬೇಕು. ಕೊಡಗಿನಲ್ಲಿರುವ ಬೇರೆ ಬೇರೆ ಮೂಲ ಜನಾಂಗದವರಂತೆ ನಾವು ಕೂಡಾ ಕೊಡಗಿನ ಮೂಲದವರೆನ್ನುವುದಕ್ಕೆ ನಮಗಿರುವ ಜಮ್ಮ ಉಂಬಳಿಗಳೇ ಸಾಕ್ಷಿ. ಇದುವೇ ಮಾತ್ರವಲ್ಲದೆ ಭಾಗಮಂಡಲ ದೇವಸ್ಥಾನ, ತಲಕಾವೇರಿ ದೇವಸ್ಥಾನ ಇವುಗಳ ತಕ್ಕ ಮುಖ್ಯಸ್ಥರೂ ಕೂಡಾ ಈ ನಮ್ಮ ಗೌಡ ಜನಾಂಗದವರೇ. ಇನ್ನೊಂದು ಉದಾಹರಣೆ ಹೇಳುವುದಾದರೆ ನಮ್ಮ ಗೌಡ ಜನಾಂಗದವರು ಹುತ್ರಿ ಹಬ್ಬದ ಸಮಯದಲ್ಲಿ ಗದ್ದೆಯಿಂದ ಕದಿರು ತೆಗೆಯಲು ಹೋಗುವ ಸಂದರ್ಭದಲ್ಲಿ ಬಿಳಿಯ ಕುಪ್ಪಸ ದಟ್ಟಿಯ ಉಡುಗೆಯಲ್ಲಿ ಕೋವಿಯನ್ನು ತೆಗೆದುಕೊಂಡು ಹೋಗುವುದನ್ನು ಈಗ್ಲೂ ಕೂಡ ನಾವು ಕಾಣಬಹುದಾಗಿದೆ. ಮೂಲದಲ್ಲಿ ನಾವು ಕೊಡಗಿನಲ್ಲಿಲ್ಲದಿದ್ದ ಪಕ್ಷದಲ್ಲಿ ಹಕ್ಕುಗಾರಿಕೆ ನಮಗೆ ಬರಲು ಸಾಧ್ಯವಿರುತ್ತಿರಲಿಲ್ಲವೇ? ಇದನ್ನೆಲ್ಲಾ ಇಲ್ಲೇಕೆ ಪ್ರಸ್ತಾಪಿಸುತ್ತಿರುವೆನೆಂದರೆ, ಇತ್ತೀಚೆಗಷ್ಟೆ ಕೊಡಗಿನಲ್ಲಿ ನಡೆದ ಕೊಡಗು ಉತ್ಸವದಲ್ಲಿ ನಮ್ಮ ಜನಾಂಗದವರಿಗೆ ವಿಫುಲ ಅವಕಾಶ ದೊರೆಯಲಿಲ್ಲವಲ್ಲ ಎಂಬ ನೋವಿನಿಂದ. ನಮ್ಮ ತವರೂರಲ್ಲಿಯೇ ನಮಗೆ ಪ್ರಾಮುಖ್ಯತೆ ದೊರೆಯಲಿಲ್ಲವೆಂದ ಮೇಲೆ ಬೇರೆಲ್ಲಿ ದೊರೆಯುವುದು? ಇದೂ ಅಲ್ಲದೆ ಕೊಡಗು "ಅಕಾಡೆಮಿ" ಸ್ಥಾಪನೆಯಾಗಿರುವುದು ಕೊಡಗಿನ ಎಲ್ಲಾ ಜನಾಂಗದವರಿಗೆ ಅನ್ವಯವಾಗುವುದೇ ಹೊರತು ಕೇವಲ ಕೆಲವು ಜನಾಂಗದವರಿಗೆ ಮಾತ್ರವಲ್ಲ. ಹೀಗಿದ್ದರೂ ಸಹ ಈ ಸಂಸ್ಥೆಯಲ್ಲಿ ನಮಗೆ ದೊರೆತ ಪ್ರಾತಿನಿಧ್ಯವಾದರೂ ಎಷ್ಟು ಎಂಬುದನ್ನು ಯಾರಾದರೂ ಗಮನಿಸಿದ್ದಾರೆಯೇ ? ಈಗ ಜಮ್ಮ ಜಾಗವನ್ನು ಬೇರೆಯವರಿಗೆ ಮಾರಲು ಸರ್ಕಾರ ಆದೇಶವೇನೋ ಹೊರಡಿಸಿರುವುದು ಸರಿಯಷ್ಟೆ. ಆದರೆ ಇದರ ಆಗು ಹೋಗುಗಳ ಬಗ್ಗೆ ನಮಗೇನಾದರೂ ಅರಿವಿದೆಯೇ? "ಜಮ್ಮ" ಇದ್ದವರಿಗೆ ಕೋವಿಯನ್ನು ಹೊಂದಲು "ಮುಕ್ತ ಧೃಡೀಕರಣ" ದೊರೆಯುತ್ತಿತ್ತು. ಆದರೆ ಜಮ್ಮ ಹೋದ ಮೇಲೆ ಕೋವಿಯ ಬಗ್ಗೆ ನಮ್ಮ ಭವಿಷ್ಯವೇನು ? ಹೀಗೆಯೇ ಒಂದರ ಹಿಂದೆ ಮತ್ತೊಂದನ್ನು ಹುಡುಕುತ್ತಾ ಹೋದಂತೆ ಕೊನೆಗುಳಿಯುವುದು ಶೂನ್ಯವೇ ಸರಿ. ಇದಕ್ಕೆ ಕಾರಣವೇನು ? ಎಂಬುವುದನ್ನು ಪರಾಂಬರಿಸಿದರೆ ದೊರೆಯುವ ಉತ್ತರವೇ "ಸ್ವಯಂಕೃತ ಅಪರಾಧ" ಅಂದರೆ ಈ ದುರ್ಗತಿಯತ್ತ ಸಾಗಲು ನಾವೇ ಕಾರಣರು. ನಾವು ನಮ್ಮ ನೆರೆಹೊರೆಯ ಜಿಲ್ಲೆಯವರಿಗೆ ನಮ್ಮೂರಿಗೆ ಆಹ್ವಾನವಿತ್ತು ಅವರನ್ನು ಜಗತ್ತಿಗೆ ತೋರಿಸುವಷ್ಟರ ಮಟ್ಟಿಗೆ ಅವರಿಗೆ ಸಹಕಾರ ನೀಡುತ್ತಲೇ ಬಂದಿದ್ದೇವೆಯೇ ಹೊರತು "ಕೊಡಗಿನ ಗೌಡರು" ಎಂದು ತೋರಿಸುತ್ತಿಲ್ಲ. ನಮ್ಮನ್ನು ನಾವೇ ಮರೆತಿದ್ದೇವೆ. ಕೆಲವರಂತು ಗೌಡರ ಅರೆಭಾಷೆಯಲ್ಲಿ ಮಾತನಾಡಲು ಅಂಜುವಂತೆ ತೋರುತ್ತಿದೆ. ನಾವು "ಕೊಡಗಿನ ಗೌಡರು" ಎಂಬ ಹೆಮ್ಮೆ ನಮಗಿರಬೇಕು. ಅಂದ ಮಾತ್ರಕ್ಕೆ ಬೇರೆ ಜನಾಂಗದವರನ್ನಾಗಲೀ, ಅವರ ಸಂಸ್ಕೃತಿಯನ್ನಾಗಲೀ ಮರೆಯಬೇಕೆಂದಲ್ಲ. ನಾವು ಬದುಕಬೇಕು ಹಾಗೂ ಬೇರೆಯವರನ್ನು ಬದುಕಲು ಬಿಡಬೇಕೆಂಬಂತೆ ನಮ್ಮತನವನ್ನು ಬೇರೆಯವರು ಗುರ್ತಿಸುವಂತಾಗಬೇಕು. ಬೇಡವೆಂದಿದ್ದಲ್ಲಿ ಈ ಜಗತ್ತಿನಲ್ಲಿ ಇಷ್ಟೊಂದು ಜಾತಿ ಮತ ಪಂಗಡಗಳಿರುತ್ತಿರಲಿಲ್ಲ. ಜಗತ್ತಿನಲ್ಲಿ ಕೇವಲ ಹೆಣ್ಣು ಗಂಡೆಂಬ ಎರಡೇ ಜಾತಿ ಅಥವಾ ಒಂದು "ಮನುಕುಲ" ಎಂಬ ಹೆಸರಿನಲ್ಲಿ ನಾವೆಲ್ಲರೂ ವಾಸಿಸಬಹುದಿತ್ತಲ್ಲವೇ ? ಆದರೆ ಇದು ಅಸಾಧ್ಯ. ಈಗಾಗಲೇ ಜಾತಿ, ಕುಲ, ಪಂಗಡ ಸೃಷ್ಟಿಯಾಗಿದೆ. ಅದನ್ನು ಅಳಿಸಿ ಹಾಕಲು ಯಾರಿಂದಲೂ ಸಾಧ್ಯವಿಲ್ಲ. ಈ ಜಾತಿ ಕುಲ ಪಂಗಡಗಳಿಗೆ ಹೊಂದಿಕೊಂಡು ನಾವು ಜೀವಿಸಬೇಕಾಗಿರುವುದರಿಂದ ನಾವು ಕೂಡ ನಮ್ಮ ಕೊಡಗಿನ ಗೌಡ ಜನಾಂಗದ ಏಳಿಗೆಗಾಗಿ ಶ್ರಮಿಸಲೇ ಬೇಕು. ಇದು ನಮ್ಮ ಜನ್ಮಸಿದ್ಧಹಕ್ಕು. ಪ್ರಪಂಚವು ಮನೋವೇಗದಿಂದ ಮುಂದುವರಿಯುತ್ತಿರುವಾಗ ನಾವು ಕೂಡಾ ಅದರ ಜೊತೆಯಲ್ಲಿ ಪುರೋಗಮಿಸಬೇಕೇ ವಿನಃ ಇಲ್ಲವಾದಲ್ಲಿ ನಾವು ಹಿಂದುಳಿದವರಾಗುತ್ತೇವೆ. ಈ ಹಿನ್ನೆಲೆಯಲ್ಲಿ ಜನಾಂಗದ ಬಗ್ಗೆ ಆಲೋಚಿಸಿ ಬೇರೆಯವರಂತೆ ನಮ್ಮದೇ ಆದ ಆಚಾರ, ವಿಚಾರ, ನಡೆ, ನುಡಿ, ಉಡುಗೆ, ತೊಡುಗೆ ಹಾಗೂ ಸಂಸ್ಕೃತಿಯನ್ನು ಹೊರ ಜಗತ್ತಿಗೆ ತೋರಿಸಬೇಕಾದ ಕಾಲ ಈಗ ಕೂಡಿ ಬಂದಿದೆ. ಈ ತನಕ ನಾವು ಮಾಡಿದ ಮಹಾ ಅಪರಾದವೆಂದರೆ, ನಮ್ಮದೇ ಆದ ಸಂಸ್ಕೃತಿಯನ್ನು ಮರೆತು ಬೇರೆಯವರ ಆಚಾರ ವಿಚಾರಗಳನ್ನು ಅನುಸರಿಸಲು ಹೊರಟು ಅಲ್ಲೂ ಮುಗ್ಗರಿಸುವುದು.

**ಅಮೆ ಕೆ. ಶಿವರಾಯ್**

(ಮುಂದಿನ ಸಂಚಿಕೆಗೆ)

# ಗೌಡ - ಗೌಡ ರಾಜ್ಯ

(ಕಳೆದ ಸಂಚಿಕೆಯಿಂದ)

ವೈಷ್ಣವ ಹೆಬ್ಬಾರರು ಪೂರ್ವಿಕರು ಶ್ರೀರಂಗ ಮತ್ತು ಕಾಂಜೀವರಂ ಕಡೆಯಿಂದ ವಲಸೆ ಬಂದು ಮೈಸೂರು ದೇಶದ 1. ಕಡಬ (ತುಮಕೂರು ಜಿಲ್ಲೆ) 2. ಗ್ರಾಮ್ಮ(ಹಾಸನ ಜಿಲ್ಲೆ) 3. ಶ್ರೀರಂಗಪಟ್ಟಣ,.4. ಮೋಳೂರು (ಬೆಂಗಳೂರು ಜಿಲ್ಲೆ) ಮತ್ತು 5. ಬೇಲೂರು. ಈ ಐದು ಕಡೆಗಳಲ್ಲಿ ನೆಲೆಸಿದರು. ಇದರಿಂದ ಇವರನ್ನೂ ಪಂಚಗ್ರಾಮಿಗಳೆಂದು ಕರೆದು ಶ್ರೀ ವೈಷ್ಣವರಲ್ಲಿ ಉಪಪಂಗಡವಾಗಿದ್ಧಾರೆ. ಇವರೂ ಮತ್ತು ಇವರ ವಂಶೀಯರ ಪ್ರಚಾರದಿಂದ ಅನೇಕ ಶೈವ ಧರ್ಮದ ಕುಟುಂಬಗಳು ವೈಷ್ಣವ ಧರ್ಮಕ್ಕೆ ಮತಾಂತರ ಹೊಂದಿದರು.

ಈ ವಂಶದಲ್ಲಿ ಮೂವರು ಹೆಬ್ಬಾರರು, ಹೊಯ್ಸಳ ಚಕ್ರವರ್ತಿಗಳಿಂದ ಗುತ್ತಿಗೆ ಪಡೆದು, ಪಶ್ಚಿಮ ಘಟ್ಟದ ಮೇಲೆ ಪ್ರಾಂತ್ಯವಾದ ಗಂಗಾಮೂಲ, ಕಳಸ, ನೆರಿಯಗಳನ್ನು ಆಳುತ್ತಿದ್ದರು. ಕಳಸದ ಶಾಸನ ನಂ. 28 (1515 ನೇ ಇಸವಿ)

ಪಂದರೀ ಸೇನೆ ಬೋವರ ಮಕ್ಕಳು ಸೂರಪ್ಪ ಸೇನೆ ಬೋವರಿಗೆ ನೂಜಿನ ಗ್ರಾಮವನ್ನು ಕ್ರಯದಾನ ಬರೆದ ಶಾಸನ ಶ್ರೀ ಕೃಷ್ಣದೇವರಾಯರು ವಿದ್ಯಾನಗರಿಯೊಳು ಸಿಂಹಾಸನಾ ರೂಢರಾಗಿ ರಾಜ್ಯವನ್ನಾಳುವ ಕಾಲದೊಳು ಕಳಸದ ಸಾವಿಂ ಗ್ರಾಮ ಮೂವರು ಹೆಬ್ಬಾರರುಗಳು, ಹೊಸಕೇರಿಯ ವೀರಪ್ಪ ಹೆಬ್ಬಾರರು, ಗುಳಕೇರಿಯ ಈ ಚೆಣ್ಣಾ ಹೆಬ್ಬಾರರು ಗಂಗೆಯ ದೇವರಸ ಹೆಬ್ಬಾರರು, ಇದೇ ಶಾಸನದಲ್ಲಿ ಇವರ ಆಡಳಿತಕ್ಕೆ ಒಳಪಟ್ಟಿದ್ದ ನೂಜಿನ ಗ್ರಾಮದ ಬತರ್ಗಡಿಗಳನ್ನು ಹೇಳಿದೆ...ನೂಜಿನ ಗ್ರಾಮವನ್ನು ನಿಮಗೆ ಕ್ರಯದಾನವಾಗಿ ಧಾರೆಯನೆರೆದು ಕೊಟ್ಟೆವು. ಆ ಗ್ರಾಮದ ಚತುಸ್ಸೀಮೆಯ, ವಿವರ...ಮೂಡಲು ಸಡೆ ಕಲ್ಲು ಹಳ್ಳದಿಂದಂ ಪಡುವಲು ತೆಂಕಲು ಸಂಪಾನಿಯ ಸಂದಿಂದ, ಬಡಗಲು ಪಡುವಲು ಕೂಡಲಿಯ ಸಂದಿಂದ, ಮೂಡಲು ಬಡಗಲು ನಿಡುವಿಗೆಯ ಹೊಳೆಯಿಂದ ತೆಂಕಲು...

**ಶಾಸನ 62** (1524ನೇ ಇಸವಿ)

ಕಳಸ ನಾಡಿನ ಪಾರುಪತ್ಯಗಾರರಾಗಿ ಸಾವಿರ ಸೀಮೆಯ ಮುಖ್ಯಸ್ಥರಾದ ಮೂವರ ಸಮ್ಮುಖದಲ್ಲಿ.

ಈ ಶಾಸನಗಳ ಆಧಾರದಿಂದ ಮೂವರು ಹೆಬ್ಬಾರರುಗಳ ಮಲೆ ಪ್ರಾಂತ್ಯದಲ್ಲಿ ಅಧಿಕಾರ ನಡೆಸುತ್ತಿದ್ದರೆಂಬುದೂ, ಇವರ ಆಡಳಿತೆಗೆ ಒಳಪಟ್ಟಿದ್ದ ಮಲೆ ಪ್ರಾಂತ್ಯ ಶೃಂಗೇರಿ ಬಳಿ ಗಂಗಾ ಮೂಲದಿಂದ ಕಳಸ ನಿಡಿಗಲ್, ಸುಳ್ಯ ಸಂಪಾಜೆಯವರೆಗೆ ವಿಸ್ತರಿಸಿತ್ತೆಂದೂ ವ್ಯಕ್ತಪಡುತ್ತದೆ. ಈ ವಂಶದ ಹೆಬ್ಬಾರರು ಈಗಲೂ ನೆರಿಯ, ಕಳಸ ಮತ್ತು ಗಂಗಾಮೂಲದಲ್ಲಿದ್ದಾರೆ.

ಈ ಶಾಸನಗಳು ಹುಟ್ಟುವ ಮೊದಲೇ ಈ ಮಲೆ ಪ್ರಾಂತ್ಯದಲ್ಲಿ ಒಕ್ಕಲಿಗ ಗೌಡ ಜನಾಂಗದವರು ವಾಸವಾಗಿದ್ದರು ಎಂಬುದಕ್ಕೆ ಕಳಸದ ಇನ್ನೊಂದು ಶಾಸನವನ್ನು ಉದಾಹರಿಸಬಹುದು.

**ಶಾಸನ** (1246ನೇ ಇಸವಿ)

"ಕಾರ್ಕಳದಲ್ಲಿ ಜಕ್ಕಲ ಮಹಾದೇವಿಯು ರಾಜ್ಯಭಾರ ಮಾಡುತ್ತಿದ್ದಾಗ ಕಳಸದ ಕಳಸೇಶ್ವರ ಸ್ವಾಮಿಯ ಸೇವೆಗೆಂದು, ಮಿಗು ದಂಡ ಕೋಟೆಗವುಂಡನು ಬಿಟ್ಟದತ್ತಿ...

ಇದರಿಂದ ವೈಷ್ಣವ ಬೆಬ್ಬಾರರ ಆಡಳಿತಕ್ಕೆ ಒಳಪಡುವ ಮುಂಚೆಯೇ "ಗೌಡ" ಜನಾಂಗದವರು ಈ ಮಲೆ ಪ್ರಾಂತ್ಯದಲ್ಲಿ ವಾಸವಾಗಿದ್ದರು ಮತ್ತು ಸಂಪತ್ತಿ ಶಾಲಿಗಳಾಗಿಯೂ, ಸುಸಂಸ್ಕೃತರಾಗಿಯೂ ಇದ್ದರು ಎಂದು ನಿರ್ಧರಿಸಬಹುದು.

ದಕ್ಷಿಣ ಕೊಡಗಿನ ನಾಮಧಾರಿ ಗೌಡ ಸಮಾಜದವರು, ಕೊಡಗಿನ ಅರಸರ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ-ಸಂಪಾಜೆ ಕಡೆಯಿಂದ ವಲಸೆ ಬಂದವರು ಎಂಬುದಾಗಿ ಕೊಡಗಿನ ಇತಿಹಾಸದಿಂದ ತಿಳಿದು ಬಂದಿದೆ.

---

## ಒಂದೇ ಉತ್ತರ ಸಾಕು

ಮಗ : ಅಮ್ಮ ಕಲ್ಕತ್ತ ಯಾವುದಕ್ಕೆ ಪ್ರಸಿದ್ಧಿ ?
ಮಗಳು : ಅಣ್ಣ ಊರಿನಿಂದ ಬಂದರೇನಮ್ಮ ? ಉ : ಬಂದರು.

ಟೀಚರ್ ನಾಳೆ ಯಾವ ಸೀರೆ ಧರಿಸುತ್ತೀರಿ ?
ಒಬ್ಬ ವಿದ್ಯಾರ್ಥಿ ತಡವಾಗಿ ಬರುತ್ತಾನೆ ? ಉ : ವೈಲೇಟ್

ಡಾಕ್ಟರು : ನಿನಗೆ ಏನಾಗಿದೆಯಮ್ಮ ?
ಮತ್ತೊಬ್ಬ : ನಿನ್ನ ಹೆಸರೇನಮ್ಮ ? ಉ : ಸೀತ

● **ಬಿ. ಸಿದ್ದರಾಜು,** ಉಪನ್ಯಾಸಕರು, ಮಡೆ.

# ಋಣ

**ಸೋಮಣ್ಣ** ದೃಢಕಾಯನಾದ ಯುವಕ. ಒಬ್ಬನೇ ಮಗ. ಮುದ್ದಾಗಿ ಬೆಳೆದವನು ಸೋಮಾರಿಯಾದ. ಶಾಲೆಗೆ ಹೋಗುವ ಪ್ರಾಯದಲ್ಲಿ ವಿದ್ಯೆಯನ್ನು ತಾತ್ಸಾರ ಮಾಡಿದ. ಓದು ಬಿಟ್ಟು ಉಂಡಾಡಿಯಾದ. ಏನೂ ಕೆಲಸ ಮಾಡದೆ ದಿನವೆಲ್ಲ ಪಡ್ಡೆಹುಡುಗರ ಜೊತೆಯಾಗಿ ಕಾಲಹರಣ ಮಾಡುತ್ತಿದ್ದ.

ತಂದೆ ತಾಯಿ ಇರುವ ವರೆಗೆ ಅವನ ಹೊಟ್ಟೆ ಹಸಿಯಲಿಲ್ಲ. ಹೆತ್ತ ತಾಯಿಗೆ ಹೆಗ್ಗಣವೂ ಮುದ್ದಲ್ಲವೇ ? ತಾವು ಅರೆ ಹೊಟ್ಟೆಯಲ್ಲಿ ಮಲಗಿದರೂ ಮಗನಿಗೆ ಕಡಿಮೆ ಮಾಡಲಿಲ್ಲ. ಮಗನ ಸೋಮಾರಿತನ ಲೋಪವಾಗಿ ಕಾಣಲಿಲ್ಲ. ಅವನ ಉಂಡಾಡಿತನ ಕೆಡುಕೆನಿಸಲಿಲ್ಲ. ಅವನಿಗೆ ಬುದ್ಧಿ ಹೇಳಿ ತಿದ್ದುವ ಗೋಜಿಗೆ ಹೋಗಲೂ ಇಲ್ಲ.

ತಂದೆ ತಾಯಿ ಸತ್ತ ಮೇಲೆ ಸೋಮಣ್ಣನಿಗೆ ಪೇಚಾಟ ಶುರುವಾಯಿತು. ಸೋಮಾರಿಯಾಗಿ ಅಲೆದಾಡುತ್ತಿದ್ದವನಿಗೆ ಏನೂ ಕೆಲಸ ಗೊತ್ತಿರಲಿಲ್ಲ. ಮೈಬಗ್ಗಿಸುವ ಮನಸ್ಸು ಇರಲಿಲ್ಲ. ಅರ್ಧ ಎಕರೆ ಗದ್ದೆ ಬಿಟ್ಟರೆ ಪಿತ್ರಾರ್ಜಿತವಾದುದೇನೂ ಇರಲಿಲ್ಲ. ಕುಳಿತು ಉಣ್ಣುವವನಿಗೆ ಕುಡಿಕೆ ಹೊನ್ನು ಸಾಲದು ಎಂಬಂತೆ ಅಪ್ಪ ಅಮ್ಮ ಕೂಡಿಟ್ಟ ಹಣ ಇವನಿಗೆ ತಿಂಗಳ ಕಾಲಕ್ಕೂ ಬರಲಿಲ್ಲ. ಬದುಕಬೇಕಾದರೆ ಹೇಗಾದರು ಸಂಪಾದನೆಮಾಡದೆ ವಿಧಿಯೂ ಇರಲಿಲ್ಲ.

ನೀಚರ ಸಂಪಾದನೆಯ ಸುಲಭಮಾರ್ಗ ಕಳ್ಳತನ. ಆದರೆ ದೊಡ್ಡರೀತಿಯ ಕಳ್ಳತನಕ್ಕೆ ಜಾಣ್ಮೆಯೂ ಬೇಕು, ಎದೆಗಾರಿಕೆಯೂ ಬೇಕು. ಇವೆರಡು ಸೋಮಣ್ಣನಲ್ಲಿರಲಿಲ್ಲ. ಆದರೂ ಹೊಟ್ಟೆ ಪಾಡಿಗಾಗಿ ಸಣ್ಣಪುಟ್ಟ ಕಳ್ಳತನ ಶುರುಮಾಡಿದ. ಅವರಿವರ ತೋಟದಲ್ಲಿ ಬಾಳೆಗೊನೆ, ತರಕಾರಿ, ಹಣ್ಣುಹಂಪಲುಗಳನ್ನು ಲಪಟಾಯಿಸಿ ಅಲ್ಲಿ ಇಲ್ಲಿ ಮಾರಿ ಬಂದ ಹಣದಿಂದ ಹೊಟ್ಟೆತುಂಬಿಕೊಳ್ಳುವ ದಾರಿಕಂಡುಕೊಂಡ. ಈ ಸಣ್ಣ ಪುಟ್ಟ ಕಳ್ಳತನಗಳ ಬಗ್ಗೆ ಊರಿನವರು ತಲೆಕೆಡಿಸಿಕೊಳ್ಳದಿದ್ದುದು ಸೋಮಣ್ಣನ ಕಳ್ಳತನಕ್ಕೆ ಇನ್ನಷ್ಟು ಕುಮ್ಮಕ್ಕು ನೀಡಿತು.

ಒಂದು ದಿನ ಸೋಮಣ್ಣ ತಿಂಗಳ ಬೆಳಕಿನಲ್ಲಿ ತರಕಾರಿ ಕದಿಯಲು ಒಂದು ತೋಟಕ್ಕೆ ನುಗ್ಗಿದ. ಆ ತೋಟದೊಳಕ್ಕೆ ಹೋಗುವ ದಾರಿಯಲ್ಲಿ ಬೇಲಿಯ ಒಂದು ಎತ್ತರದ ಗೂಟದ ಮೇಲೆ ಎತ್ತಿನ ತಲೆ ಬುರುಡೆಯನ್ನು ಸಿಕ್ಕಿಸಿದ್ದರು. (ಕೊಡಗಿನಲ್ಲಿ ಕೆಲವು ಕಡೆ ತರಕಾರಿ ತೋಟದಲ್ಲಿ, ದಾರಿಹೋಕರ ಕಣ್ಣಿನ ದೃಷ್ಟಿ ತಾಗದಿರಲೆಂದು ಕಳ್ಳಿಗಿಡವನ್ನೋ, ಅಥವಾ ದನವ ತಲೆಬುರುಡೆಯನ್ನೋ ಎತ್ತರದಲ್ಲಿ ಎದ್ದು ಕಾಣುವಂತೆ ಬೇಲಿಯ ಗೂಟಕ್ಕೆ ಸಿಕ್ಕಿಸಿಡುವ ವಾಡಿಕೆ ಇಂದಿಗೂ ಇದೆ)

ತೋಟದಲ್ಲಿ ನವಿಲುಕೋಸು, ಮೊಟ್ಟೆಕೋಸು, ಹೂ ಕೋಸು, ಅವರೆ, ಬೆಂಡೆ, ತೊಂಡೆ, ಬದನೆ ಏನೇನೆಲ್ಲಾ ಧಾರಾಳವಾಗಿತ್ತು, ಸೋಮಣ್ಣ ಕೈಗೆ ಸಿಕ್ಕಿದನ್ನೆಲ್ಲಾ ಕಿತ್ತು ಕಿತ್ತು ಗೋಣಿಚೀಲದಲ್ಲಿ ತುಂಬಿದ. ಚೀಲವನ್ನು ಬೆನ್ನ ಮೇಲೆ ಹೇರಿಕೊಂಡು ತೋಟದಿಂದ ಹೊರಬರಲು ಬೇಲಿಯನ್ನೇರಿ ದಾಟುತ್ತಿದ್ದ. ಆಗ ಹತ್ತಿರದಲ್ಲಿಯೇ ಯಾರೋ ಗಹಗಹಿಸಿ ನಗುವುದು ಅವನಿಗೆ ಕೇಳಿತು. "ಓಹೋ ನನ್ನನ್ನು ಹಿಡಿಯಲೆಂದೇ ಮಾಲಿಕ ಇಲ್ಲಿ ಅಡಗಿ ಕುಳಿತಿರಬೇಕು, ನಾನು ಸಿಕ್ಕಿಬಿದ್ದೆ" ಎಂದುಕೊಂಡ ಸೋಮಣ್ಣ ಗಾಬರಿಯಾಗಿ ಚೀಲವನ್ನು ಕೆಳಗೆ ಹಾಕಿ ಬೇಲಿದಾಟಿ ಓಡುವ ಪ್ರಯತ್ನದಲ್ಲಿ ಎತ್ತಿನ ತಲೆಬುರುಡೆಯನ್ನು ಸಿಕ್ಕಿಸಿದ್ದ ಗೂಟವನ್ನು ಹಿಡಿದ ಆಗ "ಹೇ ನಿಲ್ಲು, ಎಲ್ಲಿಗೆ ಓಡುವೆ ?" ಎಂಬ ಆಜ್ಞೆ ಕೇಳಿ ದಂಗಾಗಿ ಹೋದ.

ನಿಧಾನವಾಗಿ ಸುಧಾರಿಸಿಕೊಂಡು ನೋಡಿದಾಗ ಗೂಟದ ಮೇಲಿದ್ದ ಎತ್ತಿನ ಬುರುಡೆಯೇ ನಕ್ಕಿದ್ದು, ನಿಲ್ಲುವಂತೆ ಹೇಳಿದ್ದು ಎಂದು ಅವನಿಗೆ ತಿಳಿಯಿತು. "ಎಲೊ ಬುರುಡೆ ! ನೀನೇನು ಭೂತವೋ ಪಿಶಾಚಿಯೋ ? ಏಕೆ ಹಾಗೆ ನಕ್ಕೆ ನೀನು ? ನಿನ್ನನೀಗಲೇ ಪುಡಿ ಪುಡಿ ಮಾಡಿಬಿಡುವೆ" ಎಂದ ಕೋಪದಿಂದ. ಆಗ ತಲೆ ಬುರುಡೆ "ನಾನೇನು ಭೂತವೂ ಅಲ್ಲ, ಪಿಶಾಚಿಯೂ ಅಲ್ಲ. ಒಂದೊಮ್ಮೆ ನಿನ್ನ ಹಾಗೆ ಮಾಂಸ ತುಂಬಿಕೊಂಡು ನಿನ್ನಂತೆಯೇ ಜೀವವಿದ್ದೆ. ನಿನ್ನಂತೆ ಅವಿವೇಕದ ಕೆಲಸ ಮಾಡಿದಕ್ಕೆ ಸತ್ತಮೇಲೂ ಇಲ್ಲಿ ಸಿಕ್ಕಿಸಲ್ಪಟ್ಟಿದ್ದೇನೆ. ನಿನ್ನ ಅವಿವೇಕದ ಕೆಲಸಕ್ಕೆ ನಗು ಬಂತು" ಎಂದಿತು. "ಯೇ ಏನದು ನನ್ನ ಅವಿವೇಕ"? ಎಂದು ಕೇಳಿದ ಸೋಮಣ್ಣ.

ಬುರುಡೆ ಹೇಳಿತು, "ಈ ತೋಟದ ಯಜಮಾನನ ಮನೆಯಲ್ಲಿ ನಾನು ಎತ್ತಾಗಿದ್ದೆ. ಯಜಮಾನ ಮತ್ತು ಮನೆಯವರು ನನ್ನನ್ನು ತುಂಬ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ನಾನೂ ಸಂತೋಷದಲ್ಲಿಯೇ ಇದ್ದೆ. ಪ್ರಕೃತಿಯಲ್ಲಿ ಬೆಳೆದುದನಲ್ಲದೆ ಅವರಿವರ ಪರಿಶ್ರಮದಿಂದ ಬೆಳೆದುದನ್ನು ನಾನು ಕದ್ದು ತಿನ್ನುತ್ತಿರಲಿಲ್ಲ. ಕೆಟ್ಟಕಾಲ ಬಂದಾಗ ಬುದ್ಧಿ ಮಂದವಾಗುತ್ತದೆ. ಮಾಡಬಾರದ ಕೆಲಸವೂ ಮಾಡಿ ಹೋಗುತ್ತದೆ. ಆ ದಿನ ನನಗೇನಾಗಿತ್ತೋ ನನಗೇ ತಿಳಿಯಲಿಲ್ಲ, ಕೆಟ್ಟ ಗಳಿಗೆ. ಇದೇ ತೋಟಕ್ಕೆನುಗ್ಗಿ ನನ್ನ ಯಜಮಾನ ಬೆವರು

ಸುರಿಸಿ ಬೆಳೆಸಿದ್ದ ತರಕಾರಿಗಳನ್ನು ಹೊಟ್ಟೆ ತುಂಬ ಕದ್ದುತಿಂದೆ. ಸ್ವಾಮಿ ದ್ರೋಹ ಮಾಡಿಬಿಟ್ಟೆ. ಇದಾಗಿ ಸ್ವಲ್ಪ ದಿನಗಳಲ್ಲೇ ನನ್ನ ಆಯುಸ್ಸುಮುಗಿದು ಸತ್ತುಹೋದೆ. ಆದರೆ ಈ ತೋಟದಿಂದ ಕದ್ದು ತಿಂದ ಋಣ ಉಳಿದು ಹೋಯಿತು. ಋಣಾನುಬಂಧದಿಂದ ನನ್ನ ತಲೆಬುರುಡೆ ಇಲ್ಲಿಗೆ ಬಂದಿದೆ. ಇಲ್ಲಿ ಈಗೂಟದ ಮೇಲೆ ಕುಳಿತು ತೋಟವನ್ನು ಕಾಯುತ್ತಾ ಋಣ ತೀರಿಸುತ್ತಿದ್ದೇನೆ. ನೀನಾದರೋ ತೋಟಕ್ಕೆ ನುಗ್ಗಿ ಕಳ್ಳತನ ಮಾಡಿರುವೆ. ಚೀಲ ತುಂಬ ತರಕಾರಿ ಕದ್ದಿರುವೆ. ಈ ಕಳ್ಳತನದ ಋಣ ತೀರಿಸಲು ನಿನಗೆ ಸತ್ತ ಮೇಲೆ ಅದಾವಗತಿ ಕಾದಿದೆಯೋ ಎಂಬ ಯೋಚನೆ ಬಂದು ನಗು ಬಂತು" ಎಂದು ಹೇಳಿ ಸುಮ್ಮನಾಯಿತು.

ಸೋಮಣ್ಣನಿಗೆ ತಾನು ಮಾಡುತ್ತಿರುವ ತಪ್ಪಿನ ಅರಿವಾಯಿತು. ಅಂದಿನಿಂದ ಕಳ್ಳತನ ಮಾಡುವುದನ್ನು ಬಿಟ್ಟುಬಿಟ್ಟ. ಮೈಮುರಿದು ದುಡಿಯುವ ಅಭ್ಯಾಸ ಮಾಡಿಕೊಂಡ. ಊರಿನವರೂ ಅವನನ್ನು ಗೌರವದಿಂದ ಕಾಣತೊಡಗಿದರು.

ಕಳ್ಳತನ ಮಾಡಿದರೆ ಋಣಾನುಬಂಧ ಉಳಿದು, ಅದನ್ನು ತೀರಿಸಲು ಮುಂದಿನ ಜನ್ಮದಲ್ಲಿ ಅವರ ಮನೆಯಲ್ಲಿ ಎತ್ತಾಗಿಯೊ ಕೋಣವಾಗಿಯೋ ಹುಟ್ಟಿ ದುಡಿಯಬೇಕಾಗುತ್ತದೆ ಎಂಬ ನಂಬಿಕೆ ಹಳ್ಳಿಗಳಲ್ಲಿ ಇಂದಿಗೂ ಉಳಿದಿದೆ.

● ಬೈತಡ್ಕ ಹೇಮ ಕುಂಜಪ್ಪ
ಪಾಲೂರು, ಕೊಡಗು.

## ವಾರ್ಷಿಕೋತ್ಸವ

ಮಡಿಕೇರಿ ತಾಲ್ಲೂಕು ಯುವ ಒಕ್ಕೂಟದ ದ್ವಿತೀಯ ವರ್ಷದ ವಾರ್ಷಿಕೋತ್ಸವವು ತಾರೀಖು 12-6-97 ರಂದು ಮಡಿಕೇರಿ ಕಾವೇರಿ ಕಲಾಕ್ಷೇತ್ರದಲ್ಲಿ (ಪುರಭವನ) ನಡೆಯಿತು.

ಈ ಸಂದರ್ಭದಲ್ಲಿ ಸ್ಪರ್ಧಾಳುಗಳಿಗೆ ಭಾಷಣ ಸ್ಪರ್ಧೆ, ಕೋಲಾಟ, ಮೂಕಾಭಿನಯ, ಸುಗ್ಗಿಯ ನೃತ್ಯ ಹಾಗೂ ಸ್ಥಳಿಯ ಭಾಷಾಗೀತೆಗಳ ಸ್ಪರ್ಧೆ ಏರ್ಪಡಿಸಲಾಗಿತ್ತು.

ಸ್ಥಳಿಯ ಭಾಷಾ ಗೀತೆಗಳಲ್ಲಿ ಅರೆಭಾಷೆಗೆ ಪ್ರಾಧಾನ್ಯತೆ ಕೊಡಲಾಗಿತ್ತು. ಇದುವರೆಗೆ ಯಾವುದೇ ಸಾರ್ವಜನಿಕ ವೇದಿಕೆಯಲ್ಲಿ ನಮ್ಮ ಭಾಷೆಗೆ ಪ್ರಾಧಾನ್ಯತೆ ದೊರೆತಿರಲಿಲ್ಲ. ಆದ್ದರಿಂದ ತಾಲ್ಲೂಕು ಯುವ ಒಕ್ಕೂಟಕ್ಕೆಅಭಿನಂದನೆ ಸಲ್ಲಿಸಬೇಕು. ಹಾಗೆಯೇ ಶ್ರೀ ಅಯ್ಯಪ್ಪ ಯುವಕ ಮತ್ತು ಯುವತಿ ಮಂಡಳಿ, ಐಕೋಳ ಇದರ ಸದಸ್ಯರಾದ ಉಳುವಾರನ ಸುಶೀಲ ಪೊನ್ನಪ್ಪ ಹಾಗೂ ಕಲ್ಲುಮುಟ್ಲು ಶಾಂತಿ ಚಿಟ್ಟೆಯಪ್ಪರವರಿಂದ ಅರೆಭಾಷೆ ಹಾಡು ಹಾಡಲಾಯಿತು. ಹಾಗೆಯೇ ಸಂಗಂ ಯುವಕ ಸಂಘ, ಹೊಸ್ಕೇರಿ ಹಾಗೂ ಸ್ವಾತಿ ಯುವಕ ಮಂಡಲ ಚೆಂಬು ಇದರ ಸದಸ್ಯರು ಕೂಡ ಕಾರ್ಯಕ್ರಮದಲ್ಲಿ ಭಾಗವಹಿಸಿ ನಮ್ಮ ಗೌಡ ಜನಾಂಗದ ಕೀರ್ತಿಯನ್ನು ಎತ್ತಿ ಹಿಡಿದರು. ಕೋಲಾಟದಲ್ಲಿ ಎರಡನೇ ಬಹುಮಾನವನ್ನು ಶ್ರೀ ಅಯ್ಯಪ್ಪ ಯುವತಿ ಮಂಡಳಿ ಐಕೋಳ ಇದು ತನ್ನದಾಗಿಸಿಕೊಂಡಿತು. ಇದರಲ್ಲಿ ನಮ್ಮ ಜನಾಂಗದ ಸಾಂಪ್ರದಾಯಕ ಉಡುಪ (ಸೀರೆ)ನ್ನು ಧರಿಸಲಾಗಿತ್ತು.

ವರದಿ : ಕೊಂಪುಳಿರ ಗಣೇಶ್ ಬೋಪಯ್ಯ
ಶ್ರೀ ಅಯ್ಯಪ್ಪ ಯುವಕ ಮಂಡಳಿ, ಐಕೋಳ.

## ಓ ಪ್ರಿಯ....!

ಓ ನನ್ನ ಮನಸ್ಸನ್ನು ಸೂರೆಗೊಳ್ಳುವ ಪ್ರಿಯ...!
ಸೆಳೆಯುತ್ತಿದೆ ನಿನ್ನ ಕಡೆ ನನ್ನ ಈ ಮನ

ಹೃದಯವನ್ನು ಪಾಶದಿಂದ ಎಳೆದು ಮಾಡಬೇಡ
ಬಂಧನ.....

ನಿನಗಾಗಿ ನಾನು ಅರ್ಪಿಸಲು ಸಿದ್ಧ ನನ್ನ ತನುಮನ

ಎಂದಾದರೂ ನಿನ್ನ ಕಂಡೆನಾದರೆ ನನಗಾಗುವುದು ಆನಂದ
ಮನ ಪುಟದೇಳುವಂತಾಗುತ್ತಿದೆ ಓ ಪ್ರಿಯ.....!
ನೀ ಎಷ್ಟು ಚಂದ......

ನಿನ್ನ ಕಂಡೊಡನೆ ಅರಳುವುದು ನನ್ನ ಮುಖಾರವಿಂದ
ಎಂದಾದರೂ ಬೆಳಗುವೆನು ನಾನು ನಿನ್ನಿಂದ

ಸತ್ಯವಾಗಿ ಹೇಳುವೆನು ನಾನು ನಿನ್ನ ಪ್ರೇಯಸಿ
ನಿನಗಾಗಿ ಹಾತೊರೆದು ಈ ಕವನ ಬರೆಯುತ್ತಿರುವ
ಈ ನಿನ್ನ ವೈನಿ

● ಬಿಟ್ಟೀರ ವೈನಿ ರಾಮಯ್ಯ
ಮಡಿಕೇರಿ.

ಸೂಕ್ತಿ :-

ಸೂರ್ಯನು ಹೋದನೆಂದು ಅಳುತ್ತಾ ಕುಳಿತರೆ
ನಕ್ಷತ್ರಗಳನ್ನು ನೋಡುವ ಭಾಗ್ಯವನ್ನು ಕಳೆದುಕೊಳ್ಳುವೆ.

ಸಂಗ್ರಹ – ಬಿ. ಸಿದ್ದರಾಜು, ಮದೆನಾಡು.

# ಅಂದು ಶಿಕ್ಷಕ, ಇಂದು ಕೃಷಿಕ - ನೆರಿಯನ ಟಿ. ಸೋಮಯ್ಯ

ಮಡಿಕೇರಿ ತಾಲ್ಲೂಕಿನ ಮದೆನಾಡು ಗ್ರಾಮದ ಶ್ರೀ ನೆರಿಯನ ಟಿ. ಸೋಮಯ್ಯನವರು ಶಿಕ್ಷಕರಾಗಿ ಸುಮಾರು 38 ವರ್ಷಗಳ ಕಾಲ ದುಡಿದ ಮಹನೀಯರು. 1956ರ ಮೇ ತಿಂಗಳಲ್ಲಿ ಸೋಮವಾರ ಪೇಟೆಯ ಜೂನಿಯರ್ ಬೇಸಿಕ್ ಶಾಲೆಯಲ್ಲಿ ಶಿಕ್ಷಕರಾಗಿ ಸೇವೆಗೆ ಧುಮುಕಿದರು. ನಂತರ ಶನಿವಾರಸಂತೆ ಸೀನಿಯರ್ ಬೇಸಿಕ್ ಸ್ಕೂಲ್‌ಗೆ ವರ್ಗಾವಣೆಗೊಂಡರು. ಈ ಶಾಲೆಯಲ್ಲಿ ಸೇವೆ ಸಲ್ಲಿಸುತ್ತಿದ್ದಂತೆ ಮಡಿಕೇರಿ ತಾಲ್ಲೂಕಿಗೆ ವರ್ಗಗೊಂಡು ಹೆಚ್ಚಿನ ಸೇವೆಯನ್ನು ಮದೆನಾಡಿನಲ್ಲೇ ಮಾಡಿದರು. 1994ರಲ್ಲಿ ನಿವೃತ್ತಿ ಹೊಂದಿದರು.

ಅಂದಿನ ಶಿಕ್ಷಣದ ವಿಚಾರವನ್ನು ಶ್ರೀಯುತರೊಡನೆ ಕೇಳಿದರೆ ಅನುಭವದ ದೊಡ್ಡ ಗಂಟನ್ನೇ ನಮ್ಮ ಮುಂದೆ ಬಿಚ್ಚಿಡುತ್ತಾರೆ.

ಹಿಂದೆ ವೃತ್ತಿಪರ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಡುತ್ತಿದ್ದರು. ಬಹುಪಾಲು ಶಾಲೆಗಳು ವಿವಿಧೋದ್ದೇಶ ಶಾಲೆಗಳೇ ಆಗಿರುತ್ತಿದ್ದವು. ಬಹುಮಂದಿ ಮಕ್ಕಳು ಕೃಷಿಕರ ಮಕ್ಕಳೇ ಆಗಿದ್ದರು. ಶಾಲೆಯಲ್ಲಿ ತೋಟಗಾರಿಕೆ ಇರುತ್ತಿತ್ತು. ಶಾಲೆಯ ಅಕ್ಕ ಪಕ್ಕದ ಕೃಷಿಕರು ಒಂದೆರಡು ವರ್ಷ ಮಟ್ಟಿಗೆ ಗದ್ದೆಯನ್ನು ಶಾಲೆಗೆ ಬಿಟ್ಟುಕೊಡುತ್ತಿದ್ದರು. ಆ ಗದ್ದೆಯಲ್ಲಿ ಭತ್ತವನ್ನು ಬೆಳೆಯಲಾಗುತ್ತಿತ್ತು. ನಾಟಿ ನೆಡುವ, ಕಳೆಕೀಳುವ, ಬೆಳೆ ಕೊಯ್ಯುವ ಕೆಲಸಗಳೆಲ್ಲವನ್ನು ಮಕ್ಕಳೇ ಮಾಡುತ್ತಿದ್ದರು. ವರ್ಷಕ್ಕೆ 4–5 ಬಟ್ಟಿ ಭತ್ತ ಸಿಗುತ್ತಿತ್ತು. ಅದನ್ನು ಶಾಲೆಯಲ್ಲೇ ಉಪಯೋಗಿಸಲಾಗುತ್ತಿತ್ತು. ಸ್ವಾತಂತ್ರ್ಯ ದಿನಾಚರಣೆಯೋ, ಮಕ್ಕಳ ದಿನಾಚರಣೆಯೋ ಅಥವಾ ಇನ್ನಾವುದೇ ಶಾಲಾ ಸಮಾರಂಭಗಳಲ್ಲಿ ಪಾಯಸ ಮಾಡಲಾಗುತ್ತಿತ್ತು. ಹೀಗೆ ನಾನಾ ಸಂದರ್ಭಗಳಲ್ಲಿ ಅಕ್ಕಿಯನ್ನು ಸದುಪಯೋಗ ಮಾಡುತ್ತಿದ್ದರು. ಉತ್ಪಾದನೆ ಮತ್ತು ಖರ್ಚನ್ನು ಸರಕಾರದ ಲೆಕ್ಕಕ್ಕೆ ತೋರಿಸಬೇಕಿತ್ತು. ಒಟ್ಟಿನಲ್ಲಿ ಅಂದಿನ



ನೆರಿಯನ ಟಿ. ಸೋಮಯ್ಯ

ಶಾಲೆಗಳಲ್ಲಿ ಯಾವುದಾದರೂ ಆದಾಯವನ್ನು ತೋರಿಸಲೇಬೇಕೆಂಬ ನಿಯಮವಿತ್ತು ಎಂದು ಅಂದಿನ ದಿನವನ್ನು ನೆನೆಯುವರು.

ಅಂದು ಅಂದರೆ 40 ವರ್ಷಗಳ ಹಿಂದೆ ಶಿಕ್ಷಕರಿಗೆ ನೀಡುತ್ತಿದ್ದ ಸಂಬಳ 75ರೂಪಾಯಿಗಳು. ಬೇಸಿಕ್ 35 ರೂಪಾಯಿಗಳು. ಡಿ. ಎ. 40 ರೂಪಾಯಿಗಳು. ಸಂಬಳವನ್ನು ಆಗೊಮ್ಮೆ ಈಗೊಮ್ಮೆ ಹೆಚ್ಚು ಮಾಡುತ್ತಿದ್ದರು. ಹಾಗೆ ಹೆಚ್ಚು ಮಾಡುತ್ತಿದ್ದ ಸಂಬಳ ಎಷ್ಟು ಗೊತ್ತೆ ? ಕೇವಲ 50 ಪೈಸೆ ! ಆದರೆ ಅಂದಿನ 75 ರೂ.ಗಳು ಇಂದಿನ 5000 ಕ್ಕೆ ಸಮ ! ಹೋಟೆಲ್‌ನಲ್ಲಿ ದಿನವೊಂದಕ್ಕೆ ಒಂದು ರೂಪಾಯಿಗೆ ಹೊಟ್ಟೆ ತುಂಬ ಊಟ ಸಿಗುತ್ತಿತ್ತು. ತಿಂಗಳಿಗೆ 30 ರೂಪಾಯಿ ಕೊಟ್ಟರಾಯಿತು. 1 ರೂ. ಗೆ 8 ತೆಂಗಿನ ಕಾಯಿ ಅಂದು ಸಿಗುತ್ತಿತ್ತು. ಈಗ 8 ರೂಪಾಯಿಗೆ 1 ತೆಂಗಿನಕಾಯಿ ಸಿಕ್ಕಿದರೆ ನಿಮ್ಮ ಪುಣ್ಯ.

ಶ್ರೀಯುತರು ಇಂದಿನ ವಿದ್ಯಾರ್ಥಿಗಳು ಮತ್ತು ಪೋಷಕರನ್ನು ಕುರಿತು ಅಸಮಾಧಾನ ವ್ಯಕ್ತಪಡಿಸುತ್ತಾರೆ. 'ಅಲ್ಪ ವಿದ್ಯೆ ಮಹಾಗರ್ವಿ' ಎನ್ನುವಂತೆ ಕೆಲವರು ಆಡುತ್ತಾರೆ. ಹಿಂದೆ ಹಣ ಕಡಿಮೆಯಿತ್ತು ಬುದ್ಧಿ ಚೆನ್ನಾಗಿತ್ತು ಇಂದು ಹಣ ಹೆಚ್ಚಾಯಿತು ಬುದ್ಧಿ ಕಡಿಮೆಯಾಗಿದೆ. ವಿದ್ಯಾರ್ಥಿ ಮತ್ತು ಗುರುಗಳ ಸಂಬಂಧ ಇಂದು ಚೆನ್ನಾಗಿಲ್ಲ ಎನ್ನುತ್ತಾರೆ.

ಶ್ರೀ ಸೋಮಯ್ಯನವರು ಸದಾ ಚಟುವಟಿಕೆಯಿಂದಿರುವವರು. ವಿದ್ಯಾರ್ಥಿಯಾಗಿದ್ದಾಗಲೇ ಕೃಷಿಯ ಬಗ್ಗೆ ಆಸಕ್ತಿ ಹೊಂದಿದವರಾಗಿದ್ದರು. ಎಸ್.ಎಸ್.ಎಲ್.ಸಿ. ವರೆಗಿನ ವಿದ್ಯಾಭ್ಯಾಸ ಪಡೆದವರು. ಆದರೆ ತನ್ನ ಮಕ್ಕಳು ತನಗಿಂತಲೂ ವಿದ್ಯಾವಂತರಾಗಬೇಕೆಂದು ಬಯಸಿದರು. ಆ ಬಯಕೆಯೆ ಅವರ ಇಬ್ಬರು ಸುಪುತ್ರರು ಒಳ್ಳೆಯ ವಿದ್ಯಾವಂತರಾಗುವಂತೆ ಮಾಡಿತು.

ಒಬ್ಬ ಮಗ ಪಿ.ಯು.ಸಿ.ಯ ಗಣಿತದಲ್ಲಿ ಶೇ. 100 ಅಂಕ ಪಡೆದರು. ಇನ್ನೊಬ್ಬ ಮಗ ಭೌತಶಾಸ್ತ್ರದಲ್ಲಿ ಶೇ. 100 ಅಂಕ ಪಡೆದರು. ಅಷ್ಟೇ ಅಲ್ಲ ಸಿ.ಇ.ಟಿ. ಪರೀಕ್ಷೆಯಲ್ಲಿ ಶೇ. 94 ಅಂಕ ಗಳಿಸಿದರು. ಮುಂದೆ ಎಂ.ಬಿ.ಬಿ.ಎಸ್.ಪದವಿ ಪಡೆದರು. ಹಿರಿಯ ಮಗ ಡಾ|| ನವೀನ್ ಕೊಡಗಿನ ಪಾಲಿಬೆಟ್ಟದ ಸರ್ಕಾರಿ ಆಸ್ಪತ್ರೆಯಲ್ಲಿ ವೈದ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕಿರಿಯ ಮಗ ಡಾ|| ಪ್ರವೀಣ್ ಸ್ತ್ರೀರೋಗ ತಜ್ಞರು. ಈಗ ಮಹರಾಷ್ಟ್ರದಲ್ಲಿ ಎಂ.ಡಿ. ಮಾಡುತ್ತಿದ್ದಾರೆ. ಮಗಳನ್ನು ಸಿ.ಡಿ.ಪಿ.ಒ.

ಆಗಿರುವ ಶ್ರೀ ಮಡಪ್ಪಾಡಿ ರಾಧಾಕೃಷ್ಣ ಎಂಬುವವರಿಗೆ ಮದುವೆ ಮಾಡಿಕೊಟ್ಟಿದ್ದಾರೆ.

ಶ್ರೀ ಸೋಮಯ್ಯನವರು ಈಗ ಸಂಪೂರ್ಣವಾಗಿ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ತಮ್ಮ ಪತ್ನಿ ಶ್ರೀಮತಿ ಸರಸ್ವತಿಯವರೊಡಗೂಡಿ ರೇಷ್ಮೆ, ಕಾಫಿ, ಏಲಕ್ಕಿ, ಭತ್ತ, ತೆಂಗು, ಅಡಿಕೆ, ಜೇನು ಮುಂತಾದ ಕೃಷಿಯಲ್ಲಿ ತೊಡಗಿದ್ದಾರೆ. ಶ್ರೀಮತಿ ಸರಸ್ವತಿಯವರು ಮದೆ ಪಂಚಾಯಿತಿ ಸದಸ್ಯರಾಗಿದ್ದರು.

ಅಬ್ಬಾ ! ಮೂವತ್ತೆಂಟು ವರ್ಷಗಳ ಕಾಲ ಶಿಕ್ಷಕರಾಗಿ ದುಡಿದ ಅನುಭವಿ. ಅಂದು ಶಾಲೆಯಲ್ಲಿ ಪುಟಾಣಿಗಳನ್ನು ಹೇಗೆ ತಟ್ಟಿ ಮುಟ್ಟಿ ಮಾತನಾಡಿಸುತ್ತಿದ್ದರೋ ಹಾಗೆ ಇಂದು ಗಿಡ-ಮರಗಳನ್ನು ತಟ್ಟಿ ಮುಟ್ಟಿ ಕಾಲವನ್ನು ಸದುಪಯೋಗ ಮಾಡಿಕೊಳ್ಳುತ್ತಿದ್ದಾರೆ. ಮಕ್ಕಳೊಡನೆ ಮೌಖಿಕ ಮಾತುಗಾರರಾಗಿದ್ದ ಶ್ರೀಯುತರು ಇಂದು ಗಿಡಗಳೊಡನೆ ಮೌನ ಮಾತುಗಾರರು. ಯಾರ ತಂಟೆಗೂ ಹೋಗದೆ ಇದ್ದುದರಲ್ಲೇ ತೃಪ್ತಿಪಟ್ಟಿದ್ದಾರೆ. ಇವರಂತೆ ಇವರ ಮಕ್ಕಳೂ ವೈದ್ಯಕೀಯ ಕ್ಷೇತ್ರದಲ್ಲಿ ದೀರ್ಘಕಾಲ ಸೇವೆಯಲ್ಲಿರಲಿ. ಶ್ರೀ ಸೋಮಯ್ಯ ದಂಪತಿಗಳಿಗೆ ಮತ್ತು ಮಕ್ಕಳಿಗೆ ಶುಭಾಶಯಗಳು.

● ಬಿ.ಆರ್. ಜೋಯಪ್ಪ, ಮದೆ.

# ಸ್ತ್ರೀತ್ವದ ಕರ್ತವ್ಯಗಳು

ಪ್ರಾಚೀನ ಕಾಲದಿಂದಲೂ ಸೀತಾ, ಸಾವಿತ್ರಿ, ದಮಯಂತಿ ಅನುಸೂಯ ಮತ್ತು ದ್ರೌಪದಿ ಮೊದಲಾದವರು ಭಾರತೀಯ ಸ್ತ್ರೀತ್ವದ ಪವಿತ್ರಾದರ್ಶಗಳೆಂದು ಗೌರವಿಸಲ್ಪಟ್ಟಿದ್ದಾರೆ. ಆಧುನಿಕ ಸ್ತ್ರೀಯರು ಅವರ ಜೀವನಗಳಿಂದ ಸ್ಫೂರ್ತಿಯನ್ನು ಪಡೆಯಬೇಕು.

ಹಿಂದೂ ಸ್ತ್ರೀಯರಿಗೆ ತಮ್ಮ ಗಂಡನಲ್ಲಿರತಕ್ಕ ಶಾಶ್ವತವಾದ ಸ್ವಾಮಿಭಕ್ತಿಯು ಅವರನ್ನು ಸ್ತ್ರೀಲೋಕದ ಆದರ್ಶಕರನ್ನಾಗಿ ಮಾಡುವುದು. ಸ್ತ್ರೀಯೇ ಮನೆಯ ಸ್ಫೂರ್ತಿದಾಯಕವಾದ ಶಕ್ತಿಯಾಗಿರುವಳು. ಮನೆಯು ಸಮಾಜವನ್ನು ರೂಪಿಸುವ ನೀತಿ ನಿಯಮಗಳ ಹಾಗೂ ಜನಾಂಗವನ್ನು ಪೋಷಿಸಿ ಬೆಳೆಸುವ ಪಾಲನಾಕ್ಷೇತ್ರ. ಮನೆಯು ಮಕ್ಕಳನ್ನು ರಾಷ್ಟ್ರದ ಆದರ್ಶ ಪ್ರಜೆಗಳಾಗುವಂತೆ ಸುಶಿಕ್ಷಿತರನ್ನಾಗಿ ಮಾಡುವ ವಾತ್ಸಲ್ಯಪೂರಿತವಾದ ಶಿಕ್ಷಣಾ ಕೇಂದ್ರ.

ಸ್ತ್ರೀಯು ತನ್ನ ತಾಯ್ತನದ ಮಹತ್ವದ ಮೂಲಕ ಮನೆಯನ್ನು ಬೆಳಗುತ್ತಾಳೆ. ಮಕ್ಕಳಲ್ಲಿ ಒಳ್ಳೆಯ ಅಭ್ಯಾಸಗಳು, ಸದಾಚಾರ ಮತ್ತು ಶೀಲ ಸ್ವಭಾವ ಇವುಗಳು ಸುವ್ಯವಸ್ಥಿತವಾದಮನೆಯಲ್ಲಿ ಸ್ವಭಾವತಃ ತಾಯಿಯ ವೈಯಕ್ತಿಕವಾದ ಪ್ರಭಾವದಿಂದ ನಿರ್ಮಿಸಲ್ಪಡುವವು. ತಾಯಿಯಾದವಳು ತನ್ನ ಮಕ್ಕಳನ್ನು ಸರಿಯಾದ ಮಾರ್ಗದಲ್ಲಿ ಸುಶಿಕ್ಷಿತರನ್ನಾಗಿ ಮಾಡಿದ್ದೆ ಆದರೆ ಅವಳು ನಿಜವಾಗಿಯೂ ಸಮಾಜಕ್ಕೆ ಹಾಗೂ ರಾಷ್ಟ್ರದ ಭವ್ಯ ಸಂಸ್ಕೃತಿಗೆ ಮಹತ್ತರವಾದ ಸೇವೆ ಸಲ್ಲಿಸಿದವಳಾಗುತ್ತಾಳೆ.

ಸ್ತ್ರೀಯರ ಜೀವನವು ಪುರುಷರ ಜೀವನದಂತೆಯೇ ಶ್ರೇಷ್ಠವೂ ಮತ್ತು ಮಹತ್ವಪೂರಿತವೂ ಆಗಿದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಪುರುಷರು ಸಂಪಾದಿಸುವುದು ಮತ್ತು ಹೆಂಡತಿಯರು ಮನೆಯಲ್ಲಿ ಇರುವುದು ಎಂದರೆ ಹೆಂಗಸು ಪರೋಪ ಜೀವಿ ಹಾಗೂ ಗುಲಾಮಳೆಂದು ಅರ್ಥವಲ್ಲ, ಅವಳು ನಿಜವಾಗಿ ಜನಾಂಗವನ್ನು ರೂಪಿಸತಕ್ಕವಳು.

ಹಿಂದೂ ದೇಶದಲ್ಲಿ ಸ್ತ್ರೀಯರಿಗೆ ಉನ್ನತ ಸ್ಥಾನವು ತಾಯಿಯಾಗಿದೆ. ತಾಯಿಯು ಗೃಹ ದೇವತೆ ಎಂದು ಪೂಜಿಸಲ್ಪಡುವಳು. ಹಿಂದೂ ಶಾಸ್ತ್ರಗಳು "ಮಾತೃದೇವೋ ಭವ" "ತಾಯಿಯು ನಿಮ್ಮದೇವರಾಗಲಿ" ಎಂದು ಸಾರಿ ಹೇಳುತ್ತವೆ. ಅಂತೆಯೇ ಸ್ವದೇಶವನ್ನು ಮಾತೃಭೂಮಿ ಎನ್ನುತ್ತೇವೆ.

ವೇದ ಕಾಲದಲ್ಲಿ ಕವಿಗಳು, ವಿದ್ವಾಂಸರು, ಶಿಕ್ಷಕರು ಮತ್ತು ಶಾಸ್ತ್ರಜ್ಞರಂತೆಯೇ ಮಹಿಳೆಯೂ ಕೂಡ ವಿಶೇಷವಾದ ಘನತೆಯನ್ನು ಪಡೆದಿರುತ್ತಾಳೆ. ಸ್ತ್ರೀತ್ವದ ಘನತೆ ಗಾಂಭೀರ್ಯಗಳಿಗೆ ಮುಕುಟಪ್ರಾಯವಾದ ವೇದಕಾಲದ ಹಾಗೂ ರಾಮಾಯಣ ಮಹಾಭಾರತ ಮಹಾಕಾವ್ಯಗಳ ಕಾಲದ ಆದರ್ಶ ಜೀವನವನ್ನು ನಡೆಸುವುದರಲ್ಲಿ ಶಾಶ್ವತವಾದ ಸುಖ–ಸಂತೋಷಗಳಿವೆ. ಸ್ತ್ರೀಯರು ಇಂತಹ ದಿವ್ಯಾದರ್ಶ ಜೀವನವನ್ನು ನಡೆಸಿದರೆ ಪ್ರತಿಯೊಬ್ಬ ಹಿಂದುವಿನ ಭಾವನೆಯಂತೆ ಜಗದ್ಜನನಿ ಎಂಬ ಗೌರವವನ್ನು ಸ್ತ್ರೀಯರು ಪಡೆಯುತ್ತಾರೆ.

● ಶ್ರೀಮತಿ ರತ್ನ ಎಸ್.ಆರ್. ಶೆಟ್ಟಿ,
ಅರಕೆರೆ, ಶ್ರೀರಂಗಪಟ್ಟಣ

# ಯುವ ಶಕ್ತಿಯ ಮೇಲೆ ಗುಟಕಾ ಪ್ರಹಾರ

● ಪಟ್ಟಡ ಶಿವಕುಮಾರ್

ಒಂದು ಕಡೆ ಮಾದಕ ದ್ರವ್ಯಗಳು ಯುವಜನತೆಯನ್ನು ತನ್ನ ಬಲೆಯಲ್ಲಿ ಸೆರೆ ಹಿಡಿಯಲು ಪ್ರಯತ್ನಿಸುತ್ತಿರುವಂತೇ, ಇನ್ನೊಂದು ಕಡೆ ಗುಟ್ಕಾ ಬಹಳ ಅಗ್ಗವಾಗಿ ಯುವ ಶಕ್ತಿಯನ್ನು ತನ್ನ ಬುಟ್ಟಿಯೊಳಗೆ ತುಂಬಿಕೊಳ್ಳುತ್ತಿದೆ. ಇಂದು ಎಲ್ಲೆಲ್ಲೂ ಗುಟ್ಕಾ ಪ್ಯಾಕೇಟುಗಳು ಗೋಚರಿಸುತ್ತಿರುವುದು ಸಮಾಜದ ಮೇಲೆ ಅದರ ಪರಿಣಾಮ ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ತಿಳಿಯಬಹುದಾಗಿದೆ.

ಸುಮಾರು 5 ವರ್ಷಗಳ ಹಿಂದೆ ಸಾಮಾನ್ಯವಾಗಿ ಸುಗಂಧಭರಿತ ಅಡಿಕೆ ಪ್ಯಾಕೆಟ್ ಬಳಕೆಯಲ್ಲಿತ್ತು. ನಂತರದ ದಿನಗಳಲ್ಲಿ ದಿಢೀರನೆ ಹಲವು ರೀತಿಯ ಬಣ್ಣ ಬಣ್ಣದ ಪ್ಯಾಕೆಟ್ ಮಾಲೆಗಳು ಅಂಗಡಿಗಳಲ್ಲಿ ಗೋಚರಿಸಲಾರಂಭಿಸಿದವು. ಅವೇ ಪಾನ್ ಮಸಾಲ, ವಿಮಲ, ಮಾಣಿಕ್ ಚಂದ್, ಪಾನ್‌ಕಿಂಗ್ ಮುಂತಾದ ಹಲವಾರು ಹೆಸರಿನ ಗುಟುಕಾಗಳಾಗಿವೆ. ಇವುಗಳೂ ಸಹ ಅಡಿಕೆ ಪುಡಿಗಳೇ ಆಗಿದ್ದು "ಮತ್ತು" ಭರಿಸುವ ರಾಸಾಯನಿಕ ಮಿಶ್ರಣಗಳನ್ನು ಬೆರಸಲಾಗುತ್ತದೆ. ಅಡಿಕೆಯನ್ನು ಉಪಯೋಗಿಸುವಂತೆಯೇ ಇದನ್ನು ಉಪಯೋಗಿಸುವುದರಿಂದ ಯಾವ ಸಂಕೋಚವಿಲ್ಲದೆ ಸಮಾಜ ಅದನ್ನು ಸ್ವಾಗತಿಸಿತು. ಇದರಿಂದ ಅಡಿಕೆಗೂ ಅಪಾರ ಬೇಡಿಕೆಯುಂಟಾಗಿ, ಅಡಿಕೆ ಬೆಳೆಗಾರರ ಜೀವನ ಸುಧಾರಿಸಿತು. ಆದರೆ ಗುಟ್ಕಾ ಒಂದು ಮಾರಕವ್ಯಾಪಾರವಾಗಿ, ಭೀಕರ ಚಟವಾಗಿ ಯುವಕರಲ್ಲಿ, ವಯೋವೃದ್ಧರಲ್ಲಿ ಮಾತ್ರವಲ್ಲದೆ ಕೆಲವು ಹೆಣ್ಣುಮಕ್ಕಳಲ್ಲೂ ಬೇರೂರಿದ್ದು ಮಾತ್ರ ಸಾಮಾಜಿಕ ದುರಂತ.

ಈ ರೀತಿಯಾಗಿ ರಾಸಾಯನಿಕ ಮಿಶ್ರಿತ ಅಡಿಕೆ ಉಪಯೋಗಿಸುವುದರಿಂದ ಕ್ಯಾನ್ಸರ್ ರೋಗ ಬರಬಹುದೆಂಬುದು ವೈದ್ಯಕೀಯ ಸಂಶೋಧನೆಯಿಂದ ದೃಢಪಟ್ಟಿದ್ದರೂ ಆ ಸಂಗತಿ ಜನಮನವನ್ನು ಗುಟುಕಾ ಹೊಕ್ಕಷ್ಟು ಶೀಘ್ರವಾಗಿ ತಲುಪಲು ವಿಫಲವಾಗಿದೆ ಎನ್ನಬಹುದು. 'ಕಾರಸೀನೋಜನಿಕ' ಎಂಬ ಒಂದು ಕ್ಯಾನ್ಸರ್‌ಕಾರಕ ಅಂಶ ಅಡಿಕೆಯಲ್ಲಿರುವುದರಿಂದ ಇದರ ಜೊತೆಗೆ "ಮತ್ತು" ಭರಿಸುವ ರಾಸಾಯನಿಕಗಳನ್ನು ಮಿಶ್ರಣ ಮಾಡಿ ಗುಟ್ಕಾ ತಯಾರಿಸುವುದರಿಂದ ಕೇವಲ ಕ್ಯಾನ್ಸರ್ ಮಾತ್ರವಲ್ಲದೆ ಈಗೀಗ ಹಲವಾರು ರೋಗಗಳು ಉದ್ಭವಿಸುತ್ತಿರುವುದು ಬೆಳಕಿಗೆ ಬಂದಿದೆ. ಮುಂಬೈನಲ್ಲಿ ಗುಟಕ ರೋಗಿಗಳಿಗೆಂದೇ ಪ್ರತ್ಯೇಕ ವಾರ್ಡುಗಳನ್ನು ತೆರೆಯಲಾಗುತ್ತಿದೆ.

ಇಂದು ಶಿವಮೊಗ್ಗ ಜಿಲ್ಲೆ ಒಂದರಿಂದಲೇ 4,03,420 ಕ್ವಿಂಟಾಲ್ ಅಡಿಕೆ ಸಂಗ್ರಹವಾಗುತ್ತಿದೆ. ಒಂದು ವರ್ಷದಲ್ಲಿ ಎರಡೂವರೆ ಸಾವಿರ ಟನ್ ಉತ್ತರದ ಕಾನ್ಪುರ್‌ಗೆ ಗುಟಕ ತಯಾರು ಮಾಡಲು ತರಿಸಿಕೊಳ್ಳಲಾಗುತ್ತಿದೆ. ಅಲ್ಲಿ ತಯಾರಿಸಿದ ಗುಟಕಾ ಕರ್ನಾಟಕದಾದ್ಯಂತ ವ್ಯಾಪಾರ ಆಗುತ್ತಿದೆ. ಶಿವಮೊಗ್ಗ ಜಿಲ್ಲೆಯ ಶೇ. 50 ರಷ್ಟು ಅಡಿಕೆ ಕೋಠಾರಿ ಪ್ರಾಡಕ್ಟ್ ಕಂಪನಿ ಕೊಂಡುಕೊಂಡು ಪಾನ್‌ಪರಾಗ್ ಅನ್ನು ತಯಾರಿಸುತ್ತದೆ. ತರೀಕೆರೆಯಲ್ಲಿ ಬೆಳೆಸುವ ಸುವಾಸನೆ ಬೀರುವ ರಾಜವರ್ಧನ ಅಡಿಕೆಗೆ ಕ್ವಿಂಟಾಲ್‌ಗೆ 25,000 ರೂಪಾಯಿ ಇದ್ದು, ಮುಂಬಯಿ ಪ್ರದೇಶಕ್ಕೆ ಪಾನ್‌ಬೀಡಾ ತಯಾರಿಕೆಗಾಗಿ ಮಾರಾಟವಾಗುತ್ತದೆ.

ಕರ್ನಾಟಕ ರಾಜ್ಯದಲ್ಲಿ ಶಿವಮೊಗ್ಗ ಉತ್ತರಕನ್ನಡ, ದಕ್ಷಿಣಕನ್ನಡ, ಚಿಕ್ಕಮಗಳೂರು, ಹಾಸನ, ತುಮಕೂರು, ಚಿತ್ರದುರ್ಗ, ಬೆಳಗಾಂ, ಬಳ್ಳಾರಿ, ಕಾರವಾರ ಜಿಲ್ಲೆಗಳಲ್ಲಿ ಅಡಿಕೆಯನ್ನು ಬೆಳೆಯಲಾಗುತ್ತಿದೆ. ಮಹಾರಾಷ್ಟ್ರ, ಆಂಧ್ರಪ್ರದೇಶ, ಕೇರಳ, ತಮಿಳುನಾಡು, ಅಸ್ಸಾಂಗಳಲ್ಲೂ ಅಡಿಕೆಯು ಜನಪ್ರಿಯ ಬೆಳೆಯಾಗಿದ್ದರೂ ಅವುಗಳು ಗುಟ್ಕಾ ತಯಾರಿಕೆಗೆ ಬಳಕೆಯಾಗುತ್ತಿರುವುದು, ಆ ಬೆಳೆಗೆ ಒದಗಿಬಂದ ಕಳಂಕವಾಗಿದೆ.

ವೀಳ್ಯದೆಲೆ, ಸುಣ್ಣ ಮತ್ತು ಅಡಿಕೆ ಬೆರೆಸಿ ಮಿತವಾಗಿ ಸೇವಿಸುವುದು ಆರೋಗ್ಯಕ್ಕೆ ಹಾನಿಕಾರಕವಲ್ಲ. ಆದುದರಿಂದ ಇಂದಿಗೂ "ಎಲಡಿಕೆ" ನೀಡಿ ಅತಿಥಿ ಸತ್ಕಾರ ಮಾಡುವುದನ್ನು ಕೆಲವು ಕಡೆ ಗಮನಿಸಬಹುದಾಗಿದೆ. ಆದರೆ ಮುಂದುವರಿದ ದೇಶಗಳು ಅಡಿಕೆಯನ್ನು ನಿಷೇಧಿಸಿವೆ. ಗುಟಕ ಚಟದಿಂದ ಆಗುತ್ತಿರುವ ಅನಾಹುತವನ್ನು ಅಧ್ಯಯನ ಮಾಡಲು ಶಿಕ್ಷಣ ತಜ್ಞ ಎಚ್. ನರಸಿಂಹಯ್ಯ ಇವರ ನೇತೃತ್ವದಲ್ಲಿ ಗುಟಕಾ ನಿಷೇಧ ಸಮಿತಿಯನ್ನು ಸರ್ಕಾರ ಈಗಾಗಲೇ ನೇಮಿಸಿದೆ. ಸಮಿತಿಯ ವರದಿ ಏನೇ ಇರಲಿ ಕೇವಲ ನಿಷೇಧ, ಆದೇಶ, ಕಠಿಣ ಕ್ರಮ, ಒಣ ಉಪದೇಶಗಳಿಂದ ದುಶ್ಚಟ ನೀಗುವುದು ಅಸಾಧ್ಯ. ಸಮಾಜದ ಸ್ವಮನಃಪರಿವರ್ತನೆಯೊಂದೇ ಈಗ ಉಳಿದಿರುವ ದಾರಿ. ●

---

**ಸೂಕ್ತಿ :-**

ಹಿಡಿತವಿಲ್ಲದ ಬಂಡವಾಳಶಾಹಿ ಸಮಾಜದ ಸಿರಿವಂತರನ್ನು ಮತ್ತೂ ಸಿರಿವಂತರನ್ನಾಗಿ ಬಡವರನ್ನು ಮತ್ತೂ ಬಡವರನ್ನಾಗಿಸುತ್ತದೆ. - ನೆಹರು.

# ಗೋಡೆ ಉರುಳಿದ ನಾಡು - ನಾ ಕಂಡ ಜರ್ಮನಿ

● ಗೀತಾ ಮೋಂಟಡ್ಕ, ಸುಳ್ಯ

ಜರ್ಮನಿಯೆಂದಾಕ್ಷಣ ಗಗನ ಚುಂಬಿ ಕಟ್ಟಡಗಳು, ಮಲ್ಟಿಲೇನ್ ರಸ್ತೆಗಳಲ್ಲಿನ ವಾಹನಗಳ ಓಡಾಟ, ಬುಲೆಟ್ ಟ್ರೈನ್ ಇತ್ಯಾದಿ ದೃಶ್ಯಗಳು ನೆನಪಾಗಿ ಗರಿಕೆದರಿ ನನ್ನ ಕಣ್ಣ ಮುಂದೆ ಕುಣಿದಾಡಲು ಆರಂಭಿಸಿದವು. ಔಪಚಾರಿಕವಾದ ವಿಧಿ ವಿಧಾನಗಳನ್ನು ಪೂರೈಸಿಕೊಂಡು, ಬೆಂಗಳೂರಿನಿಂದ 1995 ರ ಜುಲೈ 29 ರಂದು ಹೊರಟ ನಾವು ಜರ್ಮನಿಯ ವಿಮಾನ ಸಾರಿಗೆ ಸಂಸ್ಥೆಯಾದ "ಲುಫ್ತಾಂಜಾ" ವನ್ನೇರಿ ಪ್ರಾಂಕ್ ಫರ್ಟ್ ತಲುಪಿದಾಗ ಬೆಳಗ್ಗಿನ ಜಾವ 7-30. ಪ್ರಾಂಕ್‌ಫರ್ಟ್‌ನಿಂದ ಮ್ಯೂನಿಕ್ ನಗರಕ್ಕೆ ಪುನಃ 35 ನಿಮಿಷಗಳ ವಿಮಾನ ಪ್ರಯಾಣದಿಂದ ತಲುಪಿದಾಗ ನಮಗೆ ಆತ್ಮೀಯವಾದ ಸ್ವಾಗತವು ಕಾದಿತ್ತು. "ಗಯಟೆ" ನಾಟಕ ಸಂಸ್ಥೆಯ ಕಾರ್ಯದರ್ಶಿನಿ ಗೋಲ್ಡ್‌ಮೆಸ್ ಹಾಗೂ ನಾಟಕ ನಿರ್ದೇಶಕ 'ಕ್ರಿಶ್ಚಿಯಸ್ ಸ್ಟ್ಯುಕ್ಲ್' ಆತ್ಮೀಯವಾಗಿ ನಮ್ಮನ್ನು ಬರಮಾಡಿಕೊಂಡರು. ಮ್ಯೂನಿಕ್‌ನ ಹೊರವಲಯದಲ್ಲಿರುವ ಓಬೆರಾಮಗಾವೋ ಎಂಬ ಊರಿಗೆ ಅಲ್ಲಿಂದ ಕೇವಲ ಒಂದೂವರೆ ತಾಸುಗಳ ಪ್ರಯಾಣ.

ತಮ್ಮ ಸ್ವಂತ ಊರಾದ ಓಬೆರಾಮಗಾವೋಕ್ಕೆ ನಿರ್ದೇಶಕರು ಆಹ್ವಾನಿಸಿ ಕರೆದುಕೊಂಡು ಹೋದಾಗ ಜರ್ಮನಿಯ ನಗರ ಹಾಗೂ ಹಳ್ಳಿಯ ಮಧ್ಯದ ನಿಜವಾದ ವ್ಯತ್ಯಾಸ ನಮಗರಿವಾಯಿತು. ಪ್ರಯಾಣ ಕಾಲದಲ್ಲಿ ಕಂಡುಬಂದ ಮನಮೋಹಕ ನೈಸರ್ಗಿಕ ಸೌಂದರ್ಯ ನಮ್ಮೂರನ್ನು ಆಗಾಗ ನೆನಪು ಮಾಡಿಕೊಡುವುದರ ಜೊತೆಗೆ, ನಿಜವಾಗಿಯೂ ನಾನು ನಮ್ಮೂರಲ್ಲೆ ಇದ್ದೇನೆ ಎಂಬ ಭಾವನೆಯನ್ನೂ ಮೂಡಿಸುತ್ತಿತ್ತು.

ಪ್ರಯಾಣ ಕಾಲದಲ್ಲಿ ತಾಯಿನಾಡಿನ ಪ್ರಯಾಣದ ರೀತಿಯ ಅನುಭವಗಳಾದರೆ ಓಬೆರಾಮಗಾವೋದಲ್ಲಿ ಇಳಿದಾಕ್ಷಣ ನಮ್ಮನ್ನು ಸ್ವಾಗತಿಸಿದ ನಾಟಕ ನಿರ್ದೇಶಕರ ತಂದೆ ತಾಯಿ ಆತ್ಮೀಯ ಪ್ರೀತಿಯಲ್ಲಿ ಹಿತಕರವಾದ ಮನೆಯ ವಾತಾವರಣವನ್ನು ಸೃಷ್ಟಿಸಿತು. ನಿರ್ದೇಶಕರ ವೃದ್ಧ ತಂದೆ ತಾಯಿಂದಿರ ಲವಲವಿಕೆ, ಆತ್ಮೀಯತೆ, ನಮ್ಮೂರ ಅಜ್ಜಅಜ್ಜಿಯರನ್ನು ನೆನಪಿಸುವಂತೆ ಮಾಡಿತು.

ಸಾಮಾನ್ಯವಾದ ಹಳ್ಳಿಯಾದರೂ ಸುಮಾರು 5000 ಮಂದಿ ಕುಳಿತು ವೀಕ್ಷಿಸಬಹುದಾದ ಸುಸಜ್ಜಿತವಾದ ರಂಗಮಂದಿರವನ್ನು ಈ ಹಳ್ಳಿಯು ಹೊಂದಿದೆ. ಕೇವಲ 5 ಸಾವಿರದಷ್ಟು ಜನಸಂಖ್ಯೆಯನ್ನು ಹೊಂದಿದ್ದರೂ ಸುಸಜ್ಜಿತವಾದಂಥ ರಂಗಮಂದಿರವನ್ನು ಹೊಂದಿರುವುದು ಈ ಹಳ್ಳಿಯ ವೈಶಿಷ್ಟ್ಯವಾಗಿತ್ತು. ರಂಗಮಂದಿರದ ಸ್ಥಾಪನೆಗೆ ಕಾರಣವಾದ ಅಂಶಗಳು ಇನ್ನಷ್ಟು ಅರ್ಥಪೂರ್ಣ ಹಾಗೂ ವೈಶಿಷ್ಟ್ಯಪೂರ್ಣ. ಏಸುಕ್ರಿಸ್ತನ ಬಗೆಗಿನ ವಾರ್ಷಿಕ ನಾಟಕ ಮಹೋತ್ಸವ ಅಂತಿಮವಾಗಿ ರಂಗಭೂಮಿಯ ಬೆಳವಣಿಗೆಗೆ ಸಹಾಯಕಾರಿ ಆಗಿರುವುದು ಹಾಗೂ ಸಂಪೂರ್ಣ ಊರಿನ ಜನಸಂಖ್ಯೆಯೇ ಪ್ರೇಕ್ಷಕರಾಗಿ ನಾಟಕವನ್ನು ನೋಡುವ ಸಂಪ್ರದಾಯ ಇಲ್ಲಿಯ ವೈಶಿಷ್ಟ್ಯಗಳು. ಜೊತೆಗೆ ನಾಟಕದಲ್ಲಿನ ಏಸುಕ್ರಿಸ್ತನ ಪಾತ್ರಕ್ಕೆ ಎಷ್ಟೊಂದು ಬೇಡಿಕೆಯೆಂದರೆ ವರ್ಷಕ್ಕೆ ಮೊದಲೇ ಅರ್ಜಿ ಸಲ್ಲಿಸಿ ಕಾಯಬೇಕಾದಂಥ ಸನ್ನಿವೇಶಗಳು ಇಲ್ಲಿ ಸಾಮಾನ್ಯವಂತೆ. ಆಯ್ಕೆಯಾದ ಅಭ್ಯರ್ಥಿಯಂತು ಕೆಲವು ನೀತಿ ನಿಯಮಾವಳಿಗಳಿಗೆ ಬದ್ಧವಾಗಿರಲೇಬೇಕು.

ಮೂವತ್ತು ಜನರ ನಮ್ಮ ತಂಡದ ನಾಯಕತ್ವವನ್ನು ಬಿ.ವಿ. ಕಾರಂತರು ವಹಿಸಿದ್ದು, ಒಂದು ತಿಂಗಳ ನಮ್ಮ ಪ್ರವಾಸ ಕಾಲದಲ್ಲಿ ಜರ್ಮನಿ ಹಾಗೂ ಆಸ್ಟ್ರಿಯಾಗಳಲ್ಲಿ 5 ಪ್ರದರ್ಶನಗಳನ್ನು ನೀಡಿದೆವು. ಮ್ಯೂನಿಕ್‌ನಲ್ಲಿನ ನಮ್ಮ ತಂಡದ ಪ್ರಥಮ ಪ್ರದರ್ಶನಕ್ಕೆ ಬಂದ ಜನರ ಪ್ರತಿಕ್ರಿಯೆ ತುಂಬಾ ಆಹ್ಲಾದಕಾರಿಯಾಗಿತ್ತು. ನಿಸಾರ್ ಅಹಮದರ ಶೇಕ್ಸ್‌ಪಿಯರನ್ 'ದಿ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್' ನ ಕನ್ನಡನುವಾದದ ನಾಟಕ. ಪ್ರದರ್ಶನದ ವೇಳೆಯಲ್ಲಿ ಎಂದೂ ತೊಡಕಾಗಲಿಲ್ಲ. ಪ್ರಾಯಶಃ ಭಾರತೀಯ ಸಂಸ್ಕೃತಿ ಭಾರತೀಯ ಮನಸ್ಸು ಜರ್ಮನರಿಗೆ ತೀರಾ ಪರಿಚಿತವಾಗಿದ್ದುದರಿಂದಲೇ ಕನ್ನಡ ನಾಟಕವನ್ನು ಅರ್ಥೈಸಿಕೊಳ್ಳುವುದರಲ್ಲಿ ಭಾಷೆ ಅಡ್ಡಿಯಾಗದೇ ಇದ್ದಿರಬೇಕು. ಜೊತೆಗೆ ಕಲೆಗೆ ಏನೂ ಭಾಷೆಯ ಗೋಡೆಗಳಿಲ್ಲವಲ್ಲ. ಬರ್ಲಿನ್ ಗೋಡೆಯನ್ನೇ ಉರುಳಿಸಿದ ಜನತೆಗೆ ಭಾಷೆ ಒಂದು ಗೋಡೆಯೇ ಅಲ್ಲ !

ಗೋಡೆಯ ಚೂರುಗಳೀಗ ಸಂಗ್ರಹಕರ ಆಸ್ತಿ. ಚೂರುಗಳಿರುವ ಗಾಜಿನ ಬೆರಣೆಯೊಂದರ ಬೆಲೆ ಇನ್ನೂರು ರೂ. ಗಳಂತೆ ! ಗೋಡೆಯ ಸ್ಥಳದಲ್ಲೀಗ ಸುಂದರವಾದ ರಸ್ತೆಯನ್ನು ನಿರ್ಮಿಸಿದ್ದಾರೆ.

ಬರ್ಲಿನ್ ಜರ್ಮನಿಯ ರಾಜಧಾನಿ. ಫ್ಯಾಶಿಸ್ಟ್, ಹಿಟ್ಲರ್, ಹಾಗೂ ಮಹಾನ್ ಮಾನವೀಯತವಾದಿ ಬ್ರೆಸ್ಟ್ ನಡೆದಾಡಿದ ಊರು. ಸಮೀಪದಲ್ಲಿನ ಹಿಟ್ಲರ್‌ನ ನರಮೇಧಕ್ಕೆ ಸಾಕ್ಷಿಯಾದ ಕಾನ್ಸೆಂಟ್ರೇಶನ್ ಕ್ಯಾಂಪ್‌ನ ಸ್ಥಳಕ್ಕೆ ನಾವು ಹೋಗಿದ್ದೆವು. ಕ್ಯಾಂಪಿನೊಳಗೆ ಕಾಲಿಟ್ಟು ಹಿಟ್ಲರ್‌ನ ಕಾರ್ಯಕ್ಕೆ ಸಾಕ್ಷಿಯಾದ ಭಿತ್ತಿ ಚಿತ್ರವನ್ನು ನೋಡಿದಾಕ್ಷಣ ಹಿಟ್ಲರ್‌ನ ವಿಷ ಕೊಠಡಿ, ಸಮೂಹ ದಫನ ವಿಧಾನ, ಅದರ ಜೊತೆಗೆ ಹಳೆಯ ಇತಿಹಾಸ ತರಗತಿಗಳ ಸ್ವಾರಸ್ಯಕರ ನೆನಪು ಜೊತೆಸೇರಿ ರೋಮಾಂಚನವಾಯ್ತು.

(ಮುಂದಿನ ಸಂಚಿಕೆಗೆ)

# "ಮರೆವು"

ಮಡಿಕೇರಿಯಲ್ಲಿ ಅಕ್ಕನಮನೆಗೆಹೋಗಿ, ಅಲ್ಲಿ ಎಳ್ಳುಮೆಂತೆ ತಿನ್ನುತ್ತಾ, ಏನೋ ಒಂದು ಲೇಖನ ಬರೆಯಬೇಕು ಎನ್ನುವ ವಿಚಾರ ಬಂದಿತು. ಈಗ ಅದು ಯಾವ ವಿಷಯದ ಬಗ್ಗೆ ಎನ್ನುವುದು ನೆನಪಿಗೆ ಬರುತ್ತಿಲ್ಲವಲ್ಲಾ.... ವಾರದ ಹಿಂದೆ ತಾಯಿ ಹೋಗಿದ್ದಾಗ ಅಕ್ಕನ ಮನೆಕೆಲಸದ ಹುಡುಗ ಗೌರಿ ಗಣೇಶ ಹಬ್ಬದಂದು ಕೋಟೆ ಗಣಪತಿಗೆ ಈಡುಗಾಯಿ ಒಡೆದ ತೆಂಗಿನ ಹೋಳುಗಳನ್ನು ಆಯ್ದುಕೊಂಡು ಬಂದಿದ್ದನಂತೆ, ಅದನ್ನು ಅಕ್ಕ ತುರಿದು ಎಳ್ಳುಮೆಂತೆ ಮಾಡುವುದಕ್ಕಿಂತ ಬಿಸಿಲಿನಲ್ಲಿ ಒಣಗಿಸುತ್ತಿದ್ದ ವಿಚಾರ ತಾಯಿಯಿಂದ ತಿಳಿದಿತ್ತು. ತಾಯಿಯ ಬ್ಯಾಗ್‌ನಲ್ಲೂ ಒಂದಷ್ಟು ಮನೆಗೆ ಬಂದಿತ್ತು. ಈಗ ನಾನು ತಿನ್ನುತ್ತಿದ್ದ ಎಳ್ಳುಮೆಂತೆ ಅದೇ ತೆಂಗಿನ ಹೋಳುಗಳಿಂದ ಮಾಡಿದ್ದು ಎನ್ನುವುದು ನೆನಪಾಯಿತು. ನೋಡಿ ಬೇಡದ್ದು ನೆನಪಿಗೆ ಬೇಡವೆಂದರೂ ಬರುತ್ತದೆ. ಬೇಕಾದ್ದು ಮಾತ್ರ ನೆನಪಿಗೆ ಬರಲೊಲ್ಲದು. ಅಂತೂ ನಾನು ಮನೆಗೆ ಬಂದಮೇಲೆ ಬರೆಯಬೇಕು ಎಂದು ಮಾಡಿದ್ದ ವಿಷಯ ಮಾತ್ರ ಎಳ್ಳುಮೆಂತೆಯ ಸುತ್ತೇ ಇದೆ. ಇತ್ತೀಚೆಗೆ ನನಗೆ ಮರೆವು ಬಹಳ ಜಾಸ್ತಿ. ಮರೆವು ಮಾನವನಿಗೆ ಒಂದು ದೈವದತ್ತ ವರ. ಆದರೆ ಮರೆವು ಒಂದು ಮಿತಿಗಿಂತ ಜಾಸ್ತಿಆದರೆ ? ಅಥವಾ ಬೇಕಾದ್ದನ್ನು ಮರೆತು ಬೇಡದ್ದು ಮಾತ್ರ ನೆನಪಿಗೆ ಬರುತ್ತಿದ್ದರೆ ? ಮೊನ್ನೆ ಬೆಳಗ್ಗೆ ನಡೆದ ಘಟನೆಯನ್ನೇ ತೆಗೆದುಕೊಳ್ಳುವ. ಸಾಮಾನ್ಯವಾಗಿ ಮನೆಯಲ್ಲಿ ವಿಶೇಷ ಪೂಜೆಯಲ್ಲದೆ, ನಿತ್ಯ ಪೂಜೆಯಾದರೆ ಬೆಳಗ್ಗೆ ಘಂಟೆಯನಷ್ಟೇ ಹೊಡೆಯುವುದು, ಸಂಜೆಯ ಪೂಜೆಯಲ್ಲಿ ಜಾಗಟೆ ಇತರೆ ಪರಿಕರಗಳನ್ನು ಬಾರಿಸುವುದು ನಮ್ಮ ಮನೆಯಲ್ಲಿ ರೂಢಿಸಿಕೊಂಡು ಬಂದ ಪೂಜಾ ಕ್ರಮ. ಆದರೆ ಮೊನ್ನೆ ಬೆಳಗ್ಗಿನ ಪೂಜೆಯಲ್ಲಿ ನಾನು ಯಾವುದೋ ನೆನಪಿನಲ್ಲಿ ಜಾಗಟೆ ಬಾರಿಸಿದೆ. ಪೂಜೆ ಆಗಿ ಸ್ವಲ್ಪ ಸಮಯದ ನಂತರ ತಂದೆ ಎದ್ದುಬಂದವರು ಜಾಗಟೆ ಏಕೆ ಹೊಡೆದೆ ? ಎಂದು ಕೇಳಿದರು ಹೌದಾ ನಾನು ಜಾಗಟೆ ಹೊಡೆದೆನೋ ? ಎಂದು ತಂದೆಯವರಿಗೆ ಮರು ಪ್ರಶ್ನೆ ಹಾಕಿದೆ.

ಇಲ್ಲಿ ಘಂಟೆ ಹೊಡೆಯಬೇಕಾಗಿದ್ದ ವೇಳೆಯಲ್ಲಿ ಜಾಗಟೆ ಬಾರಿಸಿದ್ದು ಒಂದನೇ ಮರೆವು. ಕೆಲಕ್ಷಣಗಳ ಹಿಂದಷ್ಟೇ ನಾನು ಘಂಟೆ ಹೊಡೆದದ್ದೊ ಇಲ್ಲಾ ಜಾಗಟೆ ಬಾರಿಸಿದ್ದೊ ಎಂದು ನೆನಪಿಗೆ ಬಾರದಿರುವುದು ಎರಡನೆಯ ಮರೆವು. ಬೆಳಗ್ಗಿನ ತಿಂಡಿ ತಿಂದ ನಂತರ ಏಕೋ ಮತ್ತೆ ಲ್ಯಾಟ್ರಿನ್‌ಗೆ ಹೋಗಬೇಕೆನಿಸಿತು. ಬಿಂದಿಯಲ್ಲಿ ಬಚ್ಚಲ ಮನೆಯ ಟ್ಯಾಂಕ್‌ನಿಂದ ನೀರು ತೆಗೆದುಕೊಂಡುಹೋಗಿ ಲ್ಯಾಟ್ರೀನ್ ಬಕೇಟಿಗೆ ಹಾಕಿಕೊಳ್ಳಬೇಕಿತ್ತು. ಎಷ್ಟು ಮಾಡಿದರೂ ಬಿಂದಿಗೆ ಮಾತ್ರ ಒಳಗೆ ತೂರುತ್ತಿರಲಿಲ್ಲ. ಸ್ವಲ್ಪ ಪ್ರಯತ್ನ ಪಟ್ಟ ನಂತರ ಏಕೆ, ಹೀಗೆ ? ಎಂದು ನೋಡುತ್ತೇನೆ.... ನಾನು ಬಿಂದಿಗೆಯನ್ನು ಬಚ್ಚಲು ಮನೆಯ ಹಂಡೆಯೊಳಗೆ ತೂರಿಸುವ ಪ್ರಯತ್ನದಲ್ಲಿದ್ದೆ. ನನ್ನ ಮರೆವು ಇತ್ತೀಚಿನದಲ್ಲ. ನಾನು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗಲೇ ನನ್ನ ಮರೆವಿಗೆ ಬೇಸತ್ತ ಶಿಕ್ಷಕಿಯೊಬ್ಬರು ಹೀಗಾದರೆ ನೀನು ಮದುವೆಯಾದ ಹೆಂಡತಿಯನ್ನೇ ಮರೆತುಬಿಡುತ್ತೀಯಾ ಎಂದಿದ್ದರು, ಕೋಪದಿಂದ. ಆದರೆ ಆಗ ನನಗೆ ಮದುವೆ ಮತ್ತು ಹೆಂಡತಿ ಎಂಬ ಕಲ್ಪನೆ ಇರದಿದ್ದುದರಿಂದ ಶಿಕ್ಷಕಿಯ ಮಾತನ್ನು ಅಷ್ಟು ಗಂಭೀರವಾಗಿ ತೆಗೆದುಕೊಳ್ಳದೆ ಮರೆಯುವುದನ್ನೇ ಮುಂದುವರಿಸಿಕೊಂಡು ಬಂದೆ. ಅದು ನನ್ನ ತಪ್ಪಲ್ಲ. ಮದುವೆ ಎಂದರೇನು ? ಹೆಂಡತಿ ಎಂದರೇನು ? ಎಂಬ ಕಲ್ಪನೆ ಇಲ್ಲದ ವಯಸ್ಸಿನಲ್ಲಿ ಶಿಕ್ಷಕಿ ಆ ವಯಸ್ಸಿನಲ್ಲಿ ಯಾವುದರ ಬಗ್ಗೆ ಕಲ್ಪನೆ ಇರುತ್ತದೋ ಅದೇ ವಿಚಾರದ ಉದಾಹರಣೆ ಕೊಟ್ಟು ಬೈದಿದ್ದರೆ ನಾನು ಮರೆಯುವುದನ್ನು ಮರೆಯುತ್ತಿದ್ದೇನೆನೊ. ಆದುದರಿಂದ ಓದುಗರು ದಯವಿಟ್ಟು ತಾಳ್ಮೆಯಿಂದ ಕಾಯಬೇಕಾಗಿಯೂ, ನಾನು ಬರೆಯಬೇಕೆಂದುಕೊಂಡಿದ್ದ ಲೇಖನದ ವಿಷಯ ನೆನಪಿಗೆ ಬಂದಾಗ ಮುಂದುವರಿಸುವೆನೆಂದೂ ತಿಳಿಯಪಡಿಸುತ್ತೇನೆ.

● ಕುಂಭುಗೌಡನ
ಯು. ರಂಜಿತ್, ಬಿ.ಎಸ್ಸಿ.,
ಮಕ್ಕಂದೂರು.

## ವಿದ್ಯಾರ್ಥಿ ವೇತನಕ್ಕಾಗಿ ಅರ್ಜಿ ಆಹ್ವಾನ

ಮಡಿಕೇರಿಯಲ್ಲಿರುವ ಕೊಡಗು ಗೌಡ ವಿದ್ಯಾ ಸಂಘದಿಂದ ವರ್ಷಂಪ್ರತಿ ಜನಾಂಗೀಯ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ನೀಡಲಾಗುತ್ತಿದ್ದು, ಆಸಕ್ತರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಪ್ರತಿಭಾನ್ವಿತರು 7ನೇ, 10ನೇ ದ್ವಿತೀಯ ಪಿ.ಯು.ಸಿ ಹಾಗೂ ಪದವಿ ಪರೀಕ್ಷೆಗಳಲ್ಲಿ ಅಧಿಕ ಅಂಕ ಪಡೆದವರು ಜುಲೈ 25ರ ಒಳಗಾಗಿ ಕೊಡಗು ಗೌಡ ವಿದ್ಯಾ ಸಂಘ, ಸುಬೇದಾರ್ ಅಪ್ಪಯ್ಯ ಗೌಡ ರಸ್ತೆ, ಮಡಿಕೇರಿ ಇವರಿಗೆ ತಲುಪುವಂತೆ ಸಂಬಂಧಿಸಿದ ದಾಖಲಾತಿಗಳೊಂದಿಗೆ ಅರ್ಜಿ ಸಲ್ಲಿಸಲು ಸಂಘವು ತಿಳಿಸಿದೆ.

## ಕಾವೇರಿ ಮಾತೆ

ಮಲೆನಾಡ ಮಗುವಾಗಿ
ಬಯಲಿಗೆ ಹೆಣ್ಣಾಗಿ
ಕಡಲಿಗೆ ಸತಿಯಾಗಿ
ಹರಿಯುವವಳು ನೀನಲ್ಲವೆ ?
ಕಾವೇರಿ ಮಾತೆಯೇ ನೀನಲ್ಲವೆ ॥

ಮಾನದಲ್ಲಿ ಹೆಣ್ಣಾಗಿ
ಮೌನದಲ್ಲಿ ತಲೆಬಾಗಿ
ನಾಡಿನಲ್ಲಿ ಬಿರುಸಾಗಿ
ಹರಿಯುವವಳು ನೀನಲ್ಲವೆ ?
ಕೊಡಗಿನ ಮಾತೆಯೇ ನೀನಲ್ಲವೆ ॥

ರೈತನ ತಾಯಿಯಾಗಿ
ಕಣ್ಣಿಗೆ ಹಬ್ಬಾಗಿ
ನಾಡಿನಲ್ಲಿ ಬಿರುಸಾಗಿ
ಹರಿಯುವವಳು ನೀನಲ್ಲವೆ ?
ಕರ್ನಾಟಕದ ಮಾತೆಯೇ ನೀನಲ್ಲವೆ ॥

ಕೃಷಿಗೆ ನೀರಿನ ಮೂಲವಾಗಿ
ಕೈಗಾರಿಕೆಯ ತಳಹದಿಯಾಗಿ
ವಿದ್ಯುತ್ ಶಕ್ತಿಯ ಕೇಂದ್ರವಾಗಿ
ಹರಿಯುವವಳು ನೀನಲ್ಲವೇ ?
ಲೋಕಕ್ಕೆ ಮಾತೆಯೇ ನೀನಲ್ಲವೇ ॥

● **ಶ್ರೀಮತಿ ಅನು ಕೆ. ಜಾಜಿ,**
ಚೆಟ್ಟಮಾನಿ.

## ಕೊಡಗು ಸಂಗಾತಿ

ಏನೆ ಸುಂದರಿ ಕೊಡಗು ಸಂಗಾತಿ
ಎಷ್ಟೊಂದು ವರ್ಣಿಸಲಿ ನಿನ್ನಯ ಖ್ಯಾತಿ
ಗೆದ್ದಿಹೆ ಗೌಡ ಜನಾಂಗದ ಹೃದಯದೊಳಗಿನ ಪ್ರೀತಿ
ಗಳಿಸಿಹೆ ಊರಿನ ಮೂಲೆ ಮೂಲೆಗಳಲ್ಲಿ ಕೀರ್ತಿ ॥

ನಿನ್ನಯ ಸಂಚಿಕೆ ಓದಲು ತುಂಬಾ ಅಂದ
ಅದರೊಳಗಡಗಿದೆ ನಮ್ಮೆಲ್ಲರ ಸ್ನೇಹಾನುಬಂಧ
ಹೀಗೆ ಮುಂದುವರಿಯಲಿ ನಮ್ಮಗಳ ಪ್ರೇಮಾನುಬಂಧ
ಇದಾವ ಜನುಮಗಳ ಈ ಅನುಬಂಧ

ನಿನಗಿದೆ ನಮ್ಮಯ ತುಂಬು ಮನಸಿನ ಸಹಕಾರ
ನಿನ್ನಯ ತೊಂದರೆಗೆ ನಮ್ಮಲ್ಲಿದೆ ಪರಿಹಾರ
ಹಾಕುವೆವು ನಿನಗೆ ಹರುಷದ ಹಾರ
ನಿನಗಿದೆ ನಮ್ಮೆಲ್ಲರ ಜಯ ಜಯಕಾರ

ಇರದು ನಿನ್ನಲ್ಲಿ ಜಾತಿಭೇಧ
ಉದ್ಭವಿಸದು ಎಂದೂ ನಮ್ಮಲ್ಲಿ ವಿವಾದ
ಬಾರದಿರಲಿ ಎಂದೂ ಮಿಥ್ಯಾಪವಾದ
ಬೇಡುವ ಬಾ ಕಾವೇರಮ್ಮಯ ಆಶೀರ್ವಾದ ॥

ಎಂದೂ ನಿನ್ನವ

**ಮುಕ್ಕಾಟಿ ಜಿ. ಭೀಮಯ್ಯ (ರವಿ)**
ಜಾಕೀ ಕ್ವಾರ್ಟರ್ಸ್, ಮೈಸೂರು.

## ನಗೆ ಹನಿಗಳು

ಹುಡುಗಿ ತಂದೆ : ಅಳೀಮಯ್ಯಯಾಕೆ ಮುಖ ಊದಿಸಿ ಕೊಂಡು ಕುಳಿತಿದ್ದಾರೆ ?

ಅತ್ತೆ : ಅಳಿಯಂದಿರು ಚೆಸ್ ಛಾಂಪಿಯನ್ ಅಂತೆ. ಆದರೆ ಲಗ್ನಪತ್ರಿಕೆಯಲ್ಲಿ ಸೆಕ್ಸ್ ಛಾಂಪಿಯನ್ ಅಂತ ಪ್ರಿಂಟ್ ಮಾಡಿದೆಯಂತೆ ಅದಕ್ಕೆ !

★ ★ ★

ಲಾಯರ್ : ನೀನು ಆ ಹುಡುಗಿನ ಬಲಾತ್ಕರಿಸಿದ್ದು ಸತ್ಯತಾನೆ?

ಅಪರಾಧಿ : ಇಲ್ಲ ಬುದ್ದಿ. ಅವಳು ರವಿಕೆ ಒಳಗೆ ಬಚ್ಚಿಟ್ಟ ನೂರು ರೂಪಾಯಿ ಎತ್ಕಂಡೆ ಅಷ್ಟೆ !

## ಹೆಣ್ಣಿನಲ್ಲಿ ಗಂಡು ಅಡಕ

ಹೆಣ್ಣಿನಲ್ಲಿ ಗಂಡು ಅಡಕವಾಗಿದ್ದಾನೆ ಹೇಗೆ ಎಂಬುದು ನೋಡಿ

| | | | | |
|---|---|---|---|---|
| Woman | ಎಂಬ | ಪದದಲ್ಲಿ | Man | ಇದೆ. |
| She | ಎಂಬ | ಪದದಲ್ಲಿ | He | ಇದೆ. |
| Female | ಎಂಬ | ಪದದಲ್ಲಿ | Male | ಇದೆ. |
| Lady | ಎಂಬ | ಪದದಲ್ಲಿ | Lad | ಇದೆ. |
| Madam | ಎಂಬ | ಪದದಲ್ಲಿ | Adam | ಇದೆ. |
| Mrs. | ಎಂಬ | ಪದದಲ್ಲಿ | Mr. | ಇದೆ. |

● **ಬಬಿತಾ ರಾಮೇಗೌಡ,** ಮಂಡ್ಯ.

## ಹಿಂದಿನ ಸಂಚಿಕೆಯಲ್ಲಿ ಬಿಟ್ಟು ಹೋದ ವಿಷಯ

ರಾಷ್ಟ್ರಪತಿ ಪದಕ ವಿಜೇತರಾದ ಶ್ರೀ ಬೈತಡ್ಕಅಯ್ಯಪ್ಪ ಜೋಯಪ್ಪ ನವರು 1973 ರಲ್ಲಿ ಮೊಟ್ಟೇರ ನಂಜಪ್ಪ ದಂಪತಿಗಳ ಪ್ರಥಮ ಪುತ್ರಿ ಪದ್ಮಾವತಿಯನ್ನು ಮದುವೆಯಾಗಿ ಒಂದೂವರೆ ವರ್ಷದ ಅಂತರದಲ್ಲಿ ಅಕಾಲ ಮರಣಕ್ಕೊಳಪಟ್ಟಾಗ, ಇವರ ಸಹೋದರಿ ಬೋಜಮ್ಮಳನ್ನು (ರತಿ) 1975 ರಲ್ಲಿ ಎರಡನೆ ಮದುವೆಯಾದರು. ಆಗ ಇವಳು ಪ್ರಥಮ MBBS ಮಾಡುತ್ತಿದ್ದಳು. ಇವಳನ್ನು ಶ್ರೀ ಜೋಯಪ್ಪ ನವರೆ ಓದಿಸಿ ಡಾಕ್ಟರ್‌ರನ್ನಾಗಿ ಮಾಡಿರುತ್ತಾರೆ. ಅನಂತರ ಡಾ. ಬೋಜಮ್ಮನವರು, MBBS ಜೊತೆಗೆ MD, DNB (USA) ಮಾಡಿ ಬೆಂಗಳೂರಿನ ESI ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸುತ್ತಿರುವುದರ ಜೊತೆಗೆ ನಮ್ಮ ಜನಾಂಗಕ್ಕೆಕೀರ್ತಿಯನ್ನು ತಂದಿರುತ್ತಾರೆ.

*ಬಿಟ್ಟು ಹೋದದ್ದಕ್ಕಾಗಿ ಸಂಗಾತಿ ಬಳಗ ವಿಷಾದಿಸುತ್ತದೆ.

—ವ್ಯವಸ್ಥಾಪಕ

## ರ್‍ಯಾಂಕ್ ವಿಜೇತೆ



ಮೈಸೂರು ವಿಶ್ವವಿದ್ಯಾನಿಲಯದ ಮಾನಸ ಗಂಗೋತ್ರಿಯ 1996-97ನೇ ಸಾಲಿನ ಹಿಂದಿ ವಿಭಾಗದ ಅಂತಿಮ ಎಂ. ಎ. ಪರೀಕ್ಷೆಯಲ್ಲಿ ತುಮ್ಮಜ್ಜೀರ ಸೋಮಯ್ಯನವರ ಮಗಳು ನಳಿನಿ ದ್ವಿತೀಯ ರ್‍ಯಾಂಕ್ ಗಳಿಸಿ, ಗೌಡ ಜನಾಂಗದ ಕೀರ್ತಿಯನ್ನು ಉತ್ತುಂಗಕ್ಕೇರಿಸಿದ್ದಾರೆ.

## ನಿಧನ

ಬೆಂಗಳೂರಿನ ಗಂಗಾ ನಗರದಲ್ಲಿ ವಾಸವಾಗಿದ್ದ ಡಾ. ಕಾಯರ್‌ಮಾರ್ ವೀರಪ್ಪಗೌಡರು ದಿನಾಂಕ 28-6-97 ರಂದು ಅವರ ಸ್ವಗೃಹದಲ್ಲಿ ನಿಧನರಾದರು. ಇವರು ಗೌಡ ಸಮಾಜಕ್ಕಾಗಿ ಸಾಕಷ್ಟು ಶ್ರಮವಹಿಸಿರುವುದು ಸ್ಮರಣೀಯ.

## ಕರಿ ಬೆಕ್ಕು ಅಶುಭದ ಲಕ್ಷಣವೇ ?

ಕರಿ ಬೆಕ್ಕನ್ನು ಕಂಡರೆ, ಅಶುಭವೆಂದು ಭಾವಿಸುವ ಲಕ್ಷಾಂತರ ಜನರು, ಇಂದು ವಿಶ್ವಾದ್ಯಂತ ಇದ್ದಾರೆ. ಬೆಕ್ಕು ನಮ್ಮ ದಾರಿಗೆ ಅಡ್ಡಲಾಗಿ ಹೋದರೆ, ನಮ್ಮ ಕೆಲಸ ಫಲಿಸುವುದಿಲ್ಲವೆಂಬ ನಂಬಿಕೆ ಇದೆ. ಬೆಕ್ಕು, ಅದರಲ್ಲೂ ಕರಿ ಬೆಕ್ಕು ಅಶುಭವೆಂದು ಭಾವಿಸುವುದಕ್ಕೆ ಕಾರಣವೇನು ?

ಬೆಕ್ಕು ಅಶುಭದ ಲಕ್ಷಣವೆಂದು ಭಾವಿಸುವುದಕ್ಕೆ ಮೂಢನಂಬಿಕೆಯೇ ಕಾರಣ. ಸಾವಿರಾರು ವರ್ಷಗಳಿಂದಲೂ ಈ ಮೂಢ ನಂಬಿಕೆ ಇದ್ದೇ ಇದೆ. ಈಜಿಪ್ತಿನ ಪ್ರಾಚೀನ ಜನರು, ಬೆಕ್ಕನ್ನು ಪೂಜಿಸುತ್ತಿದ್ದರು. 'ಪಾಪ್ತ್' ಎಂಬ ದೇವತೆಯ ತಲೆ, ಬೆಕ್ಕಿನ ತಲೆಯನ್ನು ಹೋಲುತ್ತಿದ್ದುದರಿಂದ ಅವರು ಬೆಕ್ಕನ್ನು ಪವಿತ್ರವೆಂದು ಬಗೆದಿದ್ದರು. ಈ ದೇವತೆ ಒಂಭತ್ತು ಜನ್ಮವೆತ್ತಿದ್ದಳೆಂದು ಅವರು ನಂಬಿದ್ದರು. ಈಜಿಪ್ತಿನಲ್ಲಿ ಯಾವುದಾದರೊಂದು ಕರಿಬೆಕ್ಕು ಸತ್ತುಹೋದರೆ, ಅದರ ದೇಹವನ್ನು, ಸುವಾಸನಾ ದ್ರವ್ಯಗಳಿಂದ ಸಂಸ್ಕರಿಸಿ, ರಕ್ಷಿಸಿಡಲಾಯಿತ್ತು. ಈಜಿಪ್ತಿನ ರುದ್ರಭೂಮಿಯೊಂದರಿಂದ ಸಾವಿರಾರು ಕರಿಬೆಕ್ಕುಗಳ ಅವಶೇಷಗಳನ್ನು ಹೊರತೆಗೆಯಲಾಗಿದೆ. ಆಗಿನ ಕಾಲದಲ್ಲಿ ಬೆಕ್ಕನ್ನು ಕೊಲ್ಲುವುದು ಒಂದು ಅಪರಾಧವಾಗಿತ್ತು. ಅಂತಹ ಅಪರಾಧವೆಸಗಿದವರಿಗೆ, ಮರಣದಂಡನೆ ನೀಡಲಾಗುತ್ತಿತ್ತು. ಆದ್ದರಿಂದ ಜನರಿಗೆ ಕರಿಬೆಕ್ಕಿನ ಬಗ್ಗೆ ತುಂಬ ಭಯವಿತ್ತು.

ಮಧ್ಯಯುಗದಲ್ಲಿ ಮಂತ್ರವಾದಿಗಳು ಮತ್ತು ಮಾಟಗಾರರು, ರಹಸ್ಯ ಔಷಧ ತಯಾರಿಸಲು, ಕರಿಬೆಕ್ಕಿನ ತಲೆ ಬುರುಡೆಯನ್ನು ಉಪಯೋಗಿಸುತ್ತಿದ್ದರು. ಆದ್ದರಿಂದ, ಜನರು ಕರಿಬೆಕ್ಕನ್ನು ತುಂಬ ಕೆಟ್ಟದೆಂದು ಭಾವಿಸುತ್ತಿದ್ದರು. ಇಂತಹ ಒಂದು ಮೂಢನಂಬಿಕೆ, ಅನೇಕ ಶತಮಾನಗಳಿಂದ ಜನರನ್ನು ಕಾಡುತ್ತಿದೆ. ನಿಜವಾಗಿ, ಯಾವ ಬೆಕ್ಕು ಅಪಶಕುನವಲ್ಲ. ಬೆಕ್ಕನ್ನು ಸುಮಾರು 5,000 ವರ್ಷಗಳ ಹಿಂದೆಯೇ ಮನೆಯಲ್ಲಿ ಸಾಕಲಾಗುತ್ತಿತ್ತು.

★ ★ ★

## ಜಗತ್ತಿನ ಅತಿದೊಡ್ಡ ವಾಚನಾಲಯಗಳು

ಲೈಬ್ರರಿ ಆಫ್ ಕಾಂಗ್ರೆಸ್ - ವಾಷಿಂಗ್ಟನ್

ಬ್ರಿಟಿಷ್ ಲೈಬ್ರರಿ - ಲಂಡನ್

ಎಸ್. ವಿ. ಐ. ಎಲ್. ಲೈಬ್ರರಿ - ಮಾಸ್ಕೋ

- ಬಬೀತಾ ರಾಮೇಗೌಡ, ಮಂಡ್ಯ

# ಗೌಡರ ವಿವಾಹ ಪದ್ಧತಿಗಳು

> ಈ ಲೇಖನವು ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ (ರಿ.) ಇದರ 'ಗೌಡ ಸಂಸ್ಕೃತಿ ಕುಟುಂಬ ಕೈಪಿಡಿ' ಎಂಬ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ. ಇದು ನಮ್ಮ ಪತ್ರಿಕೆಯಲ್ಲಿ ಕಂತುಗಳಲ್ಲಿ ಪ್ರಕಟಗೊಳ್ಳುವುದು. –ಸಂ.

**ಪೂರ್ವಜರು ಹುಡುಗನಿಗೆ ಹುಡುಗಿಯನ್ನು ನೋಡುವ ಕ್ರಮ :**

ಗೌಡ ಜನಾಂಗದಲ್ಲಿ ವಿವಾಹ ಪ್ರಾಯಕ್ಕೆ ಬಂದ ಹುಡುಗಿ ಇದ್ದ ಮನೆಗೆ ಹುಡುಗನ ಕಡೆಯ ಪೋಷಕರು ಯಾ ಸಂಬಂಧಿಕರು, ಒಬ್ಬ ಹಿತ ಚಿಂತಕರನ್ನು ಕಳುಹಿಸಿ ಅವರು ಮದುವೆ ಮಾಡುವ ಅಭಿಪ್ರಾಯವಿದ್ದಲ್ಲಿ ಅವರ ಕುಲಗೋತ್ರ ಸ್ಥಿತಿಗತಿಗಳನ್ನು ತಿಳಿದು, ಹುಡುಗನ ಕಡೆಯ ಸ್ಥಿತಿಗತಿಗಳನ್ನು ಅವನಿಗೆ ತಿಳಿಸಿ, ನೆಂಟಸ್ತನ ಬೆಳೆಸುವ ಅಭಿಪ್ರಾಯ ತಿಳಿದು ಬಂದಲ್ಲಿ, ಹಿತ ಚಿಂತಕನು ಬಂದು ವರನ ಪೋಷಕರಲ್ಲಿ ತಿಳಿಸುವನು. ನಂತರ ಶುಭ ದಿನ ನೋಡಿ ಹಿತ ಚಿಂತಕನೊಡನೆ ವರನ ಹಿರಿಯರು ಕನ್ಯೆಯ ಮನೆಗೆ ಹೋಗುವರು. ಕನ್ಯೆಯ ಮನೆಯಲ್ಲಿ ಅತಿಥಿಗಳನ್ನು ಸ್ವಾಗತಿಸುವರು.

**ಪ್ರಥಮತ ಮನೆಗೆ ಹೋಗುವ ಕ್ರಮ :**

ಹಿಂದಿನ ಕಾಲದಲ್ಲಿ ಸಂಧ್ಯಾದೀಪ ಬೆಳಗುವ ಸಮಯದಲ್ಲಿ ಕನ್ಯೆಯ ಮನೆಗೆ ಪ್ರವೇಶಿಸುವುದು ಹಿರಿಯರ ಪದ್ಧತಿ. ಕನ್ಯೆ ಮನೆಯಲ್ಲಿ ಚಾಪೆ ಹಾಕಲ್ಪಟ್ಟಿದ್ದು, ಆ ಚಾಪೆಯಲ್ಲಿ ಮನೆಗೆ ಮುಖವಾಗಿ ಪಡಸಾಲೆಯಲ್ಲಿ ನೆಂಟರು ಕುಳಿತುಕೊಳ್ಳುವರು. ಲೋಕಾಭಿರಾಮ ಮಾತನಾಡುತ ಆ ರಾತ್ರಿ ಅಲ್ಲಿಯೇ ತಂಗುವರು. ಮರುದಿನ ಮುಂಜಾನೆ ಎದ್ದು ನೆಂಟರು ಕೈಕಾಲು ಮುಖತೊಳೆದು ಕನ್ಯೆಯ ತಂದೆ-ತಾಯಿಯರೊಡನೆ ಸುತ್ತುವರಿದು ಮಾತನಾಡುತ್ತಾ ಮಾತು ಪ್ರಾರಂಭಿಸುವರು.

"ಹಣ್ಣು ಇದ್ದ ಮರಕ್ಕೆ ಹಕ್ಕಿಗಳು ಬಂದಂತೆ ಹೆಣ್ಣು ಇದ್ದ ಮನೆಗೆ ಗಂಡು ಬರುವುದು ಸಹಜ" ಎನ್ನುವಂತೆ ನಿಮ್ಮ ಮನೆಯ ಒಂದು ದೀವಿಗೆಯನ್ನು ಪಡಕೊಂಡು ಹೋಗಿ ನಮ್ಮ ಮನೆಯಲ್ಲಿ ಬೆಳಗಿಸಬೇಕೆಂದು ನಮ್ಮ ಅಭಿಪ್ರಾಯವೆನ್ನುವರು. ಕನ್ಯೆಯ ಕಡೆಯವರಿಗೆ ಸರಿ ಕಂಡು ಬಂದಲ್ಲಿ, ಮುಂದಿನ ನೆಂಟಸ್ತನಕ್ಕೆ ಸಿದ್ಧರಿದ್ದರೆ ಯಾವುದಕ್ಕೂ ಬಂಧು-ಬಳಗ ಮನೆಯವರನ್ನು ತಿಳಿದು ಹುಡುಗನನ್ನು ನೋಡಿ, ಆಮೇಲೆ ಮುಂದಿನ ವಿಚಾರಗಳನ್ನು ತಿಳಿಸುತ್ತೇವೆ ಎಂದು ಮಾತು ಮುಗಿಸುವರು. ಹುಡುಗನನ್ನು ಬರಮಾಡಿಕೊಳ್ಳುವ ದಿನವನ್ನು ನಿಶ್ಚಯಿಸಿ ನೆಂಟರನ್ನು ಕಳುಹಿಸಿಕೊಡುತ್ತಾರೆ. ಮನೆಗೆ ಬಂದು ಹುಡುಗನ ತಂದೆ-ತಾಯಿ ಹುಡುಗಿಯ ಗುಣ, ನಡತೆ, ರೂಪ–ಲಾವಣ್ಯವನ್ನು ಹುಡುಗನಿಗೆ ತಿಳಿಸುವುದಲ್ಲದೆ, ನೀನು ಇಂಥಾ ದಿನ ನೆಂಟರಲ್ಲಿಗೆ ಹೋಗಿ ಕನ್ಯೆಯನ್ನು ನೋಡಿ ಬಾ, ಎಂದು ಹೇಳುವರು. ಇದು ಹಿಂದಿನ ಪೂರ್ವಜರ ಕ್ರಮ ಈಗಿನ ಕಾಲದಲ್ಲಿ ಸಾಧಾರಣವಾಗಿ ಹುಡುಗನೇ ಹುಡುಗಿಯನ್ನು ನೋಡಿ ನಂತರ ಮನೆಯವರನ್ನು ಕಳುಹಿಸುವ ಕ್ರಮ.

ಗೊತ್ತುಪಡಿಸಿದ ದಿನದಂದು ಹುಡುಗನು ಹುಡುಗಿಯ ಮನೆಗೆ ಹಿತಚಿಂತಕರೊಡನೆ ಯಾ ಕುಟುಂಬದ ಗೆಳೆಯರೊಡನೆ ಹೋಗಿ ಹುಡುಗನು ಹುಡುಗಿಯನ್ನು, ಹುಡುಗಿಯು ಹುಡುಗನನ್ನು ನೋಡಿಕೊಳ್ಳುವರು. ಹುಡುಗಿಯ ತಂದೆ-ತಾಯಿ ಮನೆಯವರು ಹುಡುಗನ ರೂಪ, ಮೈಕಟ್ಟು ಮೆಚ್ಚುಗೆ ಪಟ್ಟಲ್ಲಿ ವರನ ಜೊತೆಯಲ್ಲಿ, ಮುಂದೆ ವರನ ಮನೆ ನೋಡುವುದಕ್ಕೆ ಬರುವ ದಿನವನ್ನು ತೀರ್ಮಾನಿಸಿ ಹೇಳಿ ಕಳುಹಿಸುವರು.

**ಹುಡುಗನ ಮನೆ ನೋಡುವ ಪದ್ಧತಿ :**

ಪ್ರಪ್ರಥಮ ಬಾರಿಗೆ ಹುಡುಗನ ಮನೆ ನೋಡಲು ಮೂರು ಜನ ಗಂಡಸರು, ಇಬ್ಬರು ಮುತ್ತೈದೆಯರು ಸೇರಿ ಗಂಡಿನ ಮನೆಗೆ ಹೋಗಿ ಅವರ ಆಸ್ತಿ, ಅಂತಸ್ತು, ಕೃಷಿ ಮೊದಲಾದವನ್ನು ನೋಡಿ ಇಷ್ಟಪಟ್ಟಲ್ಲಿ, ಮುಂದೆ ಹುಡುಗನ ಮತ್ತು ಹುಡುಗಿಯ ಜಾತಕವಿದ್ದಲ್ಲಿ ಹೋಲಿಸಿ ನೋಡುವುದು. ದೇವಸ್ಥಾನದಲ್ಲಿ ಹೂ ತೆಗೆಸುವುದು, ಗಣಕೂಟ ಸರಿ ಕಂಡು ಬಂದಲ್ಲಿ ಒಪ್ಪಿ ವೀಳ್ಯ ಶಾಸ್ತ್ರದ ಕ್ರಮಕ್ಕೆ ದಿನ ನಿಶ್ಚಯಿಸಿ ಬರುವರು.

**ಸೋದರ ಮಾತನಾಡಿಸುವುದು :**

ವೀಳ್ಯ ಶಾಸ್ತ್ರಕ್ಕೆ ಮೊದಲು ಒಂದು ನಿಶ್ಚಿತ ದಿನದಲ್ಲಿ ಹುಡುಗಿಯ ಕಡೆಯಿಂದ ಅವಳ ತಂದೆ–ತಾಯಿಯರು ಹುಡುಗಿಯ ಸಮೇತ ಸೋದರ ಮಾವನಲ್ಲಿಗೆ ಹೋಗಿ ನಾವು ಒಂದು ಶುಭ ಕಾರ್ಯವನ್ನು ತೆಗೆಯುವವರಿದ್ದೇವೆ, ಅದಕ್ಕೆ ನಿಮ್ಮಗಳ ಒಪ್ಪಿಗೆ ಇದೆಯೇ ಎಂದು ವಿಚಾರಿಸುವರು. ಆಗ ಸೋದರದವರೇನಾದರು ಆ ಹುಡುಗಿಯನ್ನು ಇಷ್ಟಪಟ್ಟು ತಮ್ಮ ಮನೆ ಹತ್ತಿಸಿಕೊಳ್ಳುವ ವಿಚಾರವಿದ್ದಲ್ಲಿ ಆಕ್ಷೇಪಣೆ ಎತ್ತುವರು. ಅದಕ್ಕಾಗಿವೀಳ್ಯಶಾಸ್ತ್ರದ ಕ್ರಮಕ್ಕೆ ಮುಂಚಿತವಾಗಿಯೇ ಸೋದರ ಮಾತಾಡಿಸಬೇಕು. ಅವರ ಒಪ್ಪಿಗೆ ಪಡೆದು ಸೋದರದವರನ್ನು ವೀಳ್ಯಶಾಸ್ತ್ರಕ್ಕೆ ಆಹ್ವಾನಿಸಿ ಹಿಂತಿರುಗುವರು.

(ಮುಂದುವರಿಯುವುದು)

# ನಿಮ್ಮ ಪತ್ರಗಳು

### ಸುವರ್ಣ ಸೇತುವೆಯಾಗಲಿ

ಮಾನ್ಯರೆ,

'ಕೊಡಗು ಸಂಗಾತಿ' ಪತ್ರಿಕೆಯನ್ನು ಓದಿ ತುಂಬಾ ಸಂತೋಷವಾಯಿತು. ನಿಮ್ಮ ಸಾಹಸಕ್ಕೆ ತುಂಬ ಅಭಿನಂದನೆಗಳು. ಅಂತರಾಳದ ಪ್ರತಿಭೆ ಉಕ್ಕಿ ಹೊರ ಬಂದಿದೆ. ಅದು ನವಚೇತನಗೊಂಡು ಬೆಳೆದು ಹೆಮ್ಮರವಾಗಲಿ, ಪ್ರತಿಯೊಂದು ಗೌಡ ಕುಟುಂಬಕ್ಕೂ ಈ ಪತ್ರಿಕೆ ಸುವರ್ಣ ಸೇತುವೆಯಾಗಲೆಂದು ಹಾರೈಸುತ್ತೇನೆ.

**ಕಾಸ್ಪಾಡಿ ಮೋನಪ್ಪ,** ಬೆಂಗಳೂರು.

### ವರ್ಣಿಸಲು ನನ್ನಲ್ಲಿ ಅಕ್ಷರಗಳಿಲ್ಲ

ಮಾನ್ಯರೆ,

ನೀವು ಶುರು ಮಾಡಿದ ಸಂಗಾತಿ ನೋಡಿ ಹೇಳಲಾರದ ಸಂತೋಷವಾಯಿತು. ನಿಮ್ಮ ಸಾಹಸವನ್ನು ವರ್ಣಿಸಲು ನನ್ನಲ್ಲಿ ಅಕ್ಷರಗಳಿಲ್ಲ. ನೀವು ಮಾಡುವ ಕೆಲಸಗಳು ಇನ್ನೂ ಮುಂದುವರೆಯಲಿ. ಈ ದಿಸೆಯಲ್ಲಿ ನಿಮಗೆ ಸರ್ವರ ಸಹಕಾರ ಸಿಗಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ. ಗೌಡ ಯುವಕರ ಪರವಾಗಿ ವಂದನೆಗಳನ್ನು ಸಲ್ಲಿಸುತ್ತೇನೆ.

**ಕೊಳಂಬೆ ವಿನು ಬೆಳ್ಯಪ್ಪ**
ಅಭ್ಯತ್ ಮಂಗಲ.

### ನಮ್ಮ ಸಂಘ ಸೇರಿತು

ಮಾನ್ಯರೆ,

ನಮ್ಮ ನಿಮ್ಮ 'ಕೊಡಗು ಸಂಗಾತಿ'ಯು ನಮ್ಮ ಸಂಘ ಸೇರಿತು. ನೋಡಿ ಆಶ್ಚರ್ಯದ ಜೊತೆಯಲ್ಲಿ ಆನಂದವಾಯಿತು. ಇದೇ ರೀತಿಯಲ್ಲಿ ಗೌಡ ಜನಾಂಗದ ಪತ್ರಿಕೆಯಾಗಿ 'ಕೊಡಗು ಸಂಗಾತಿ' ಯಾಗಿ ಬಾಳಬೆಳಗಲಿ ಎಂದು ನಮ್ಮ ಹೃದಯಪೂರ್ವಕವಾಗಿ ಹಾರೈಸುತ್ತೇವೆ.

**ಅಣ್ಣೆಚ್ಚಿರ ಲಕ್ಷ್ಮಣ ಇಂದಿರಾ,**
ಬೆಂಗಳೂರು.

### ಯಶಸ್ಸಿನ ಹಾದಿಯಲ್ಲಿ ಸಾಗಲಿ

ಮಾನ್ಯರೆ,

ಕೊಡಗು ಗೌಡ ಜನಾಂಗದ ಐಕ್ಯತೆಯ ಅರಿವು ಮೂಡಿಸುವ ಉದ್ದೇಶ ಹೊಂದಿರುವ 'ಕೊಡಗು ಸಂಗಾತಿ' ನಿರಂತರ ಯಶಸ್ಸಿನ ಹಾದಿಯಲ್ಲಿ ಸಾಗಲಿ. ಅರೆಭಾಷೆಗೆ ಇನ್ನೂ ಹೆಚ್ಚಿನ ಪ್ರಾಮುಖ್ಯತೆ ಇರಲಿ ಎಂದು ಹಾರೈಸುತ್ತೇನೆ.

**ಕುಂಞಾಳಿಯನ ಬಿ. ತಮ್ಮಯ್ಯ,**
ಚೇರಂಬಾಣೆ.

### ಹತ್ತಕ್ಕಾದ್ರೂ ಏರ್‌ಲಿ

ಮಾನ್ಯರೆ,

ನೀವ್ ಕಳ್ಸಿ ಕೊಡ್ತಾ ಇರ್‌ವ 'ಕೊಡಗು ಸಂಗಾತಿ' ಬರ್‌ತಾಉಟ್ಟು. 20 ಪುಟಲಿ ಬರಿ ನಾಕ್ ಪುಟ ಗೌಡಕನ್ನಡಕೆ ಇಸೊಳರಿ. ಅದ್ ಹತ್ತಕ್ಕಾದ್ರೂ ಏರ್‌ಲಿ. ಹಾಂಗೆ ಮುಂದೆ ಇಡೀ ಪತ್ರಿಕೆನೇ ಗೌಡ ಕನ್ನಡಲಿ ಬರಕೂಂತ ನನ್ನ ಆಸೆ. ನೀವೂಗೆಲ್ಲಾಕು ದೇವ್ರು ಒಳ್ಳೆದ್ ಮಾಡಲಿಂತ ಬೈಸೊಳೆ.

**ಎನ್.ಎಸ್. ದೇವಿಪ್ರಸಾದ್,**
ಸಂಪಾಜೆ.

### ದಾರಿದೀಪವಾಗಲಿ

ನಮ್ಮ ಭಾಸೆಲಿ ಒಂದ್ ಪತ್ರಿಕೆ ಬಂದದ್ ನೋಡಿ ತುಂಬಾ ಖುಷಿಯಾತ್. ಇದ್ ಇಂದ್‌ನ ಯುವ ಗೌಡ ಜನಾಂಗದ ಏಳಿಗೆಗೆ ದಾರಿದೀಪವಾಗಲಿತ ಹೇಳಿ ಹಾರೈಸಿನೆ.

● **ಉಳುವಾರನ ಮನ್ಮಥ ಪೊನ್ನಪ್ಪ,**
**ಕೆದಂಬಾಡಿ ಅನಿಲ್ ಈರಪ್ಪ,**
ಬೆಂಗಳೂರು.

### ಹೊತ್ತು ತರಲಿ

ಕೊಡಗು ಸಂಗಾತಿ ಮೂಡಿಬರುವುದು ತುಂಬಾ ಹೆಮ್ಮೆಯ ವಿಷಯ ಇನ್ನೂ ಹೆಚ್ಚೆಚ್ಚು ಜನಾಂಗೀಯ ವಿಷಯಗಳನ್ನು ಹೊತ್ತು ತರಲಿ ಎಂದು ಆಶಿಸುತ್ತೇನೆ.

**ಜಿ.ಕೆ. ಸತೀಶ್‌ಕುಮಾರ್,**
ಕುಣಿಗಲ್.

# ಅರೆ ಭಾಷಿಕ ವಿಭಾಗ

## ಜಗಳ ಯಾಕೆ ತೆಡ್ತ್‌ಲೆ

ಮಳೆಗಾಲ ಸುರಾಗಿ ಆಗಲೇ ಸುಮಾರ್ ದಿನ ಆಗಿತ್ತ್. ಎಲ್ಲಾ ಜನ ಗದ್ದೆ ಹೂಡ್ತಾ ಒಳೊ. ಕೆಲು ಸೋಮಾರಿಂಗಳ್ನ ಬುಟ್ರೆ ಎಲ್ಲವರ್ದ್ ಬೀಜ ಹಾಕಿ, ಹಡ್ಲ್ ತೆಯ್ದ್ ಎರಡ್ನೆ ಸಾಲ್ ಹೂಡಿಕೆ ಸುರಾಗಿತ್ತ್. ಗದ್ದೆಗೆ ಬೀಜ ಹಾಕಿದ ಮ್ಯಾಲೆ ಮಕ್ಕ ಯಾವ ಕಟ್ಟೊಟ್ಟ ಇಲ್ಲದೆ ಒಲೆ ಬುಡಲಿ ಕುದ್ದ್‌ಕಂಡ್ ಹಲ್ಸನೆಕ್ಕಿ ಹೊರ್ಕಂಡ್ ಪಟ್ಟಾಂಗ ಹೊಡ್ಕಂಡಿದ್ದವೆ. ಮಳೆ ಚಳಿಗೆ ಬೊದುಕಿಕೂ ಬೊತ್ತದ ಅತ್ತ ಸಾಯುಕೂಬೊತ್ತದ ಅಜ್ಜಂಗ ಅಜ್ಜಿಕ ನರ್ಕಿಯಂಡ್ ಹತ್ರ ಬಂದರೂ ಮಕ್ಕ ಬೇರ್ ಇಳ್ದೋದಂಗೆ ಕುಕ್ಕುರ್‌ಬೊಡ್ಕಂಡಿದ್ದವೆ. ಮತ್ತೆ ಎರಡ್ ಬಿರ್‌ದಾಳ್ ಕೊಟ್ಟ್, ಕೈಲಿದ್ದದೊಣ್ಣೆ ಎತ್ತ್‌ಕಾಕನೇ ಅಲ್ಲಿಂದ ಪದ್ರಾಡ್ ಹಾಕುದು.

ಕಿಟ್ಟ ಹೈದಂಗೆ ಮಾತ್ರ ಮಳೆ ಎಷ್ಟೇ ಬರ್‌ಲಿ ಬ್ಯಾಜಾರ ಆಕಿಲೆ. ಒ...ಳ್ಳ ಬಾಮಳೆ... ಒಳ್ಳ ಬಾಮಳೆ ತೇಳಿ ಕೇಕೆ ಹಾಕಂಡ್ ಕುಣಿಯುಂವ. ಯಾಕೆ ತೆಳ್ರೆ ಮಾರ್ನೆದಿನ ತೋಡ್ ತುಂಬಿರೆ ಸ್ಕೂಲ್‌ಗೆ ಚಕ್ಕರ್ ಹಾಕಕ್‌ತೇಳುವ ಗ್ಯಾನ ಅವಂದ್. ಈಗ ಅವಂಗೆ ಮತ್ತೊಂದು ಕುಸಿ, ಅದ್ ಕಾರ್ತಿಂಗ ಆದಂರ್ದ್. ಮಳೆಗಾಲ್‌ಲಿ ಅಪ್ಪ ಅಪ್ಪಿತಪ್ಪಿ ಸಂತೆಗೋದರೂ ಸೋಮವಾರ ಒಂದೇ ದಿನ. ಕಿಟ್ಟೆ ಮಾಸ ತಂಬತೇಳ್ರೆ, 'ತನ್ನೆ ಮೊನೆ ಬಾಯಿ ತೊಳ್ಕಬಲಾ' ತೇಳಿ ಬುಡೋವು. ಕಾರ್ತಿಂಗಳ್‌ಲಿ ಗುಳಿಗಂಗೆ ಹೆಂಗೂ ಮೂರ್ನಾಕ್ ಕೋಳಿ ಬಿದ್ದೇ ಬಿದ್ದದೆ ತೇಳುವ ಕುಸಿ ಕಿಟ್ಟೆದ್.

ಕಳ್ದ ಅಯ್ತ್ವಾರ ಬೆಳ್ಗನೇ ಪೂಜಾರಿ ನಿತ್ತವನೂ, ಬಾಚಲ್‌ದಾರ ಸೇರಿ ವರ್ಷಂಪ್ರತಿ ಗುಳಿಗಂಗೆ ಕೊಡುವ ಮಾಯನಮುರದ ಬುಡದ ಜಾಗನ ಕೆತ್ತಿ ಮಸಾರಮಾಡಿ ಗುಳಿಗನ ಕಲ್ಲಿಗೆ ಆಕಾಸ ಕಾಣುವಂಗೆ ಮಾಡ್ದೊ. ಸಾಯಂಕಾಲ ಬ್ಯಾಗಬ್ಯಾಗ ದನಗಳ್ನೆಲ್ಲ ಆರ್ಗ್ಂಟಿಗೆ ಕಟ್ಟಿ ಎಲ್ಲೋವು ಒಂದ್‌ಕಡೆ ಸೇರಿ, ಗುಳಿಗಂಗೆಕೊಡೋ ಜಾಗ ತಲುಪಿದೊ. ಪೂಜಾರಿಯಾದಂವ ಬೆಳಿಗಂದೇ ಹಸಿ ಹೊಟ್ಟೆಲೇ ಇರ್ದ್, ಷರ್ಟ್ ತೆಗ್ದ್ ಬಿಳಿ ಪಂಚೆ ಉಟ್ಕಂಡ್ ಮಳೆ ಚಳಿಗೆ ನಡ್‌ಗಿಕ್ಕಂಡ್ ಗಣಪತಿಗೆ ಬಾಳೆಲೆಲಿ ಅಕ್ಕಿ ಅದರ ಮ್ಯಾಲೆ ತೆಂಗಿನ ಕಾಯಿ ಇಟ್ಟತ್. ಒಂದೆರಡ್ ಜನ ಅವಂಗೆ ಸಹಾಯನೂ ಮಾಡ್ದೊ. ಮತ್ತೆ ಎಲ್ಲವರ ಕೈಗೆ ಅಕ್ಕಿಕೊಟ್ಟ್ ಪೂಜಾರಿ ಪಕ್ಕಣೆ ಸುರುಮಾಡ್ತ್. "ಈಗ ಹೇಳಿ ಕಂಬೊದು ಎನ್‌ತೇಳಿರೆ ವರ್ಷಂಪ್ರತಿ ಕೊಡುವಂಗೆ ಈವರ್ಷನೂ ಕೊಡ್ತಾ ಒಳೊ. ಪೂಜಾರಿ ನಿತ್ತದರ್ಲೆ ಆಗಲಿ, ಇಲ್ಲಿ ಸೇರ್ದ ದರ್ಲೇ ಆಗಲಿ ತಪ್ಪು ನೆಪ್ಪು ಬಂದಿದ್ದರೂ, ಅದರ್ನ ಸರಿಮಾಡ್ಕಂಡ್ ಕಾಪಾಡಿಕೊಣ್ಬ್ದ ನಿಂಗೆ ಸೇರ್ದ್" ತೇಳಿ ಹೇಳ್‌ಕಾಕನ ಎಲ್ಲವೂ ಸಾಮೀ ತೇಳಿ ಅಕ್ಕಿ ಹಾಕಿದೊ.

ಇದಾದ ಮೇಲೆ ಇನ್ನೊಂದು ಕಡೆ ಬಾಳೆ ರಟ್ಟೆಗಳ್ನೆಲ್ಲ ಕತ್ರಿಸಿ ಚೌಕಾಕಾರವಾಗಿ ಅದರ ಮುಂದೆ ತ್ರಿಕೋನಾಕಾರಾಗಿ ಜೋಡ್ಸಿ ಅದ್‌ಕ್ಕೆಲ್ಲ ಕೋಲ್ತಿಗಳ್ನ ಚುಚ್ಚಿಟ್ಟ್, ಅದ್ಕೆ ದೀಪ ಹೊತ್ತಿಸಿ, ಎಲ್ಲದಕ್ಕೂ ಹೊದ್ರಿಹಾಕಿ, ಚಳ್ಳೆಗಳ್ನ ಮಾಡಿ ಒಂದರ್ಲಿ ಕಳ್ಳು, ಮತ್ತೊಂದರ್ಲಿ ಕುರ್ದಿ ನೀರೂ ಇಟ್ಟ್, ತೆಂಗಿನ ಕಾಯಿ ಒಡ್ದ್, ಕಾಯಿ ಗಡಿಗಳ್ನ ಅದರ್ಲಿ ಇಟ್ಟಾದ ಮ್ಯಾಲೆ. ಮೊದ್ಲೇ ಕಾಲ್ ಕಟ್ಟಿ ಪಕ್ಕಲೇ ನೆಂದ್ ಕಂಡ್ ಇದ್ದ ಕೋಳಿಗಳ್ನ ಹಿಡ್ಕ ಬಾಕೆ ಹೇಳ್ದೊ. ಕಿಟ್ಟೆಮಂದ್ ನಾಕ್ ಕೋಳಿಗ ಇದ್ದೊ. ಅದರ್ಲಿ ಒಂದ್ ದೊಡ್ಡ ಹುಂಜನ ಅಂವ ಬಾರೀ ಪ್ರೀತಿಲಿ ಸಾಕಿತ್ತ್. ಅದ್‌ಕ್ಕೆ ಎರ್ಡ್‌ವರ್ಷ ವಯಸ್ಸಾಗಿತ್ತ್. ತಾನ್ ಊಟ ಮಾಡ್ಕನ ಅದ್ಕೊಂದಿಷ್ಟ್ ಹಾಕಂವ. ಇವನ ಕಂಡ್ರೆ ಕೋಳಿ ಹಿಂದಿಂದೇ ಸುತ್ತ್‌ತಿತ್ತ್. ಕಿಟ್ಟೆಗೆ ಇಷ್ಟೊತ್ತ್ ಬಾರೀ ಕುಸಿ ಇತ್ತ್ ಆದರೆ ಅಲ್ಲಿ ಒಬ್ಬ ಕೋಳಿನ ರೆಕ್ಕೆ ಕಾಲ್‌ನ ಅಮುಪ್ರಿಸಿ ಹಿಡ್ಕಂಡ್ ಪೂಜಾರಿ ಅದರ ಒಂದ್ ತೊಪ್ಪುಟೆ ಕಿತ್ತ್ ಕೋಲ್ತಿಲಿ ಹೊತ್ತ್‌ತ್ತಿರುವ ಬೆಂಕಿಲಿ ಸುಟ್ಟ್ ಕೋಳಿ ಬಾಯ್ಗೆ ತಿನ್ಸಿ, ಬೊಡ್ಡ್ ಕತ್ತಿಲಿ ಕೊರಕೊರತೇಳಿ ಕೊಯ್ತ್. ಕೋಳಿನ ಶರೀರ ಭಾಗ ನಿಮುರಿ ನಿಮಿ, ರಕ್ತನ ತುಂಡಾದ ಕುತ್ತಿಗೆಗಾಗಿ ಸೋರ್ಸ ತಿತ್ತ್. ತಲೆನ ಮಾತ್ರ ಕೊಯ್ದ್ ಅಲ್ಲೇ ಹಾಕ್ತಿದ್ದೊ, ಅದ್ ಅರೆಬಾಯಿ ತೆರ್ದ್, ಅರ್ಧ ಕಣ್ಣ್ ಮುಚ್ಚಿ ಮೊಸ್ಗದೆ ಬಿದ್ದಿರ್‌ಕಾಕನ, ಆಚೆ ಬಿಸಾಕಿದ ಕೋಳಿದ್ ಶರೀರ ಭಾಗ ರೆಕ್ಕೆ ಬೊಡ್ಕಂಡ್ ಹಾರಿ ಹಾರಿಕಂಡ್ ಬಾಳದೂರ ಹೋಗಿ ಬುಡ್ತಿದ್ದೊ. ಇದರ್ನೆಲ್ಲ ನೋಡ್ದ ಕಿಟ್ಟೆ ಅವನ ಕೋಳಿನ ಕೊಯ್ಸುದೇ ಬ್ಯಾಡ ತೇಳುವ ತೀರ್ಮಾನಕ್ಕೆ ಬರ್ತಿರ್‌ಕಾಕನೇ ಅವನ ಕೈಂದ ಕೋಳಿ ಕಿತ್ತ್ ಕೊಯ್ದೇ ಬುಟ್ಟೊ. ಕಿಟ್ಟೆಗೆ ದುಃಖ ತಡಿಯಕೇ ಆತ್ಲೆ. ಬೊಡ್ದ್ ಕತ್ತಿಲಿ ಕೊಯ್ಯ್ಕನ ಕೋಳಿ ಕೋರೆಯಾಂವ್ ಕೊರ್ರ್‌ತೇಳಿ ಕಿರ್ಚಕನ ಇವಂಗೆ ಉಮ್ಮಳ್ಸಿ ಉಮ್ಮಳ್ಸಿ ಮರ್ದ್ಕೆಬಂದರೂ ಹೆಂಗಾರ್ ತಡ್‌ಕಣ್ತ್.

ಹಿಂಗೆ ಕೋಳಿಗಳ್ನೆಲ್ಲ ಕೊಯ್‌ದಾದ ಮ್ಯಾಲೆ ಗುಳಿಗಂಗೊಪ್ಪಿಸೊಕಲೆ. ಪೂಜಾರಿ ಎಲ್ಲವರಕೈಗೆ ಹೊದ್ರಿಕೊಟ್ಟತ್. ಮೊಣ್ಣ ಪಜ್ಜನ ಪಿಳ್ಳಿಕೈಗೆ ಹೊದ್ರಿ ಕೊಟ್ಟದೇ ಕೊಟ್ಟದ್ ಅವ್ರ ತಿಂದೂ ಆತ್. ಆಗ

ಯಾರೋ ಯೇ ಹೈದ ತಿಂಬಕಲ್ಲನೇ ಕೊಟ್ಟದ್ ಇಂದ ಹಿಡ್ಕತೇಳಿ ಪುನಃ ಏಡ್ರ್ ಹೊದ್ರಿ ಹಾಕಿದ ಮ್ಯಾಲೆ ಕಣ್ ಬಾಯ್ ಬುಡ್ಕಂಡ್ ನಿತ್ತತ್. ಮತ್ತೆ ಪೂಜಾರಿ ಸುರ್‌ಮಾಡ್ತ್ "ವರ್ಷಂಪ್ರತಿ ಕೊಡುವಂಗೆ ಈ ವರ್ಸಾನೂ ನಾವೀಗ ಗುಳಿಗಂಗೆ ಎಡೆ ಹಾಕಂಡೊಳೊ. ಇದರ್ಲಿ ಅನೇಕ ತಪ್ಪು ನೆಪ್ಪು ಬಂದಿರ್ದು. ಎಡೆ ಹಾಕಿದರ್ಲಾಗಲಿ, ಕೋಳಿ ಕೊಯ್ದಲ್ಲಾಗಲಿ ಏನೇ ತಪ್ಪು ಬಂದರೂ ಮನ್ನಿಸಿಕಂಡ್, ಹೋದಲಿ, ಬಂದಲ್ಲಿ, ದನಕರ್‌ಗಳಿಗಾಗಲಿ, ಮಕ್ಕಮರಿಗಳಾಗಲಿ, ಇನ್ನೂ ಎಂತದೆಲ್ಲೋ ಪೇಳ್ಕನ ಇನ್ನೊಂದಿಬ್ಬರು ಏನೇನೋ ಸೇರ್ಸಿ, ಯಾರಿಗೊಬ್ಬರಿಗೂ ತೊಂದರೆ ಕೊಡದೆ ಕಾಪಾಡೊಕು"ತೇಳಿ ಹೊದ್ರಿನ ಎಡೆಗೆ ಹಾಕಿ, ಎಲ್ಲ ತಿರ್ಕಣಿತೇಳಿ ಎಡೆಗೆ ಬೆನ್ನ್‌ಮಾಡಿ ನಿತ್ತೊ. ಯಾರೋ ಒಬ್ಬ ಹಿರಿಯ ಕೆಮ್ಮಿದ ಮ್ಯಾಲೆ, ಎಲ್ಲವೂ ಸುಮ್ಮನೆ ಕೆಮ್ಮಿಕಂಡ್ ಮತ್ತೆ ತಿರ್ಗಿ ಅವರವರ ಕೋಳಿ ಹೆರ್ಕಣಿಕೆ ಹೋದೊ.

ಈಗ ನೋಡಿ ತಮಾಷೆ. ತಲೆಹೋದ ಕೋಳಿಗಳ್ನ ಯಾರ್ದು ತೇಳ್ದು. ಮೂವತ್ತ್ ಮೂವತ್ತೈದ್ ಕೋಳಿಗ ಒಳೊ. ಒಂದೆರ್ಡ್ ಕೋಳಿಗ ಕಾಂಬೊದೇಲೆ. ಇದ್ ನನ್ನ ಕೋಳಿ ಇದ್ ನಿನ್ನ ಕೋಳಿತೇಳಿ ಜಗಳ ಹತ್ತಿಕಣ್ತ್. ಮಾತಿಗೆ ಮಾತ್ ಬೆಳ್ತ್. ಯಾಗೋ ಪಂಡ್‌ನ ಜಗಳನ್ನೆಲ್ಲ ತಕಂಡ್, ನೀನ್‌ನಂಗೆ ಮಾಟ ಮಾಡಿಯೊಳ, ನೀನ್ ನಂಗೆ ಛಿದ್ರ ಮಾಡಿಯೊಳತೇಳ್ಕಂಡ್ ಒಬ್ಬಂದೊಬ್ಬ ಪುರ್ಕ ಬಡ್ಕಂಡೊ. ಯಾರಿಗೆ ಏಟ್ ಬೀತೋ, ಯಾರಿಗೆ ಬೀತ್ಲೆಯೋ ಗೊತ್ಲೆ. ಸಣ್ಣಮಕ್ಕ ಕೈಗೆ ಸಿಕ್ಕಿದ ಕೋಳಿಗಳ್ನ ಎತ್ತಿಕಂಡ್ ನಡ್ದೊ. ಕೆಲುವು ಕೋಳಿ ಇಲ್ಲದೆ ಬರಿಕೈಲಿ ಮನೆಗೆ ಬಂದೋ.

ಮಾರನೆ ದಿನಂದಒಬ್ನ ಮುಖ ಒಬ್ಬ ನೋಡಿಕಿಲೆ. ಮುಖ ಸಿಂಡ್ರಿಸಿಕಂಡ್, ತಿರ್ಗಿಸಿಕಂಡ್ ಓಡಾಡುವೆ. ಕಿಟ್ಟ ಅವನ ಪ್ರೀತಿಯ ಕೋಳಿನ ಕೊಯ್ದರ ಗ್ಯಾನ ಮಾಡಿಕಂಡ್ ಕೋಳಿ ಮಾಸ ತಿಂಬೊದರ್ನ ಬುಟ್ಟ್ ಬುಡ್ತ್. ಆದರೆ ಒಂದ್ ಪ್ರಶ್ನೆ ಮಾತ್ರ ಅವನ ಕಾಡ್ತಿತ್ತ್, ಗುಳಿಗಂಗೆ ಕೋಳಿ ಕೊಟ್ಟರೂ, ಗುಳಿಗ ಜಗಳ ಯಾಕೆ ತಡ್ತ್ಲೆ.

● ಪಟ್ಟಡ ಶಿವಕುಮಾರ್

## ಟ್ಯಾಪ್‌ನ ಮಹತ್ವ

ಒಂದು ಸಲ ಗಂಡ ಹೆಣ್ಣ್ ಮಂಞ್ಞ ಇವೆಲ್ಲ ಸೇರಿ ಕಾರ್ ಮಾಡಿಕಂಡ್ ಹಾರಂಗಿಗೆ ಪಿಕ್‌ನಿಕ್ ಹೋದೋ. ಹೋಗಿ ಹಾರಂಗಿ ಪಾರ್ಕ್ ಸುತ್ತಿ ಡ್ಯಾಮ್‌ನ ಹತ್ರ ಬಾಕಾಕನ ಮಂಞ್ಞ ಬಿಸ್ಕೆಟ್ ಬೇಕುತ ಅಮ್ಮನ ಹತ್ರ ಹಟ ಮಾಡ್ತ್. ಇನ್ನ್ ಮಂಞ್ಞನ ಹಟ ತಡಿಯಕಾಗದೆ ಅಮ್ಮ ಬಿಸ್ಕೆಟ್ ತೆಗ್ದ್ ಕೊಡ್ತ್. ಹಂಗೆ ಮಂಞ್ಞ ನೀರ್ ಹತ್ರ ಹೋಕಾಕನ ಅವನ ಕೈಂದ ಹೆಂಗೋ ಬಿಸ್ಕೆಟ್ ನೀರೊಳಗೆ ಬೀತ್. ಆಗ ಮಂಞ್ಞ ನಂಗೆ ಆ ಬಿಸ್ಕೆಟ್ ತೆಗ್ದ್‌ಕೊಡ್ ಅಮ್ಮಂತ ಕೇಳಕಾಕನ, ಮಂಞ್ಞನ ಸಮಧಾನ ಮಾಡಿಕೆ ಅಮ್ಮ ಹೇಳ್ತ್. ಮಂಞ್ಞ ಆ ಬಿಸ್ಕೆಟ್ ಎಲ್ಲಿಗೆ ಹೋಲೆ, ಅದು ನಾವು ನಾಳೆ ಬೆಳ್ಗೆ ನೀರ್ ಹಿಡಿಯಕಾಕನ ಟ್ಯಾಪ್‌ಲಿ ಬಂದೆಂತ. ಆಗ ಮಂಞ್ಞಂಗೆ ಸಮಾಧಾನ ಆತ್.

ಹಂಗೇ ಮುಂದೆ ಇವೆಲ್ಲ ಹೋಕಾಕನ ಅಪ್ಪ ಕಾಲ್‌ಜಾರಿ ನೀರೊಳಗೆ ಬಿತ್, ಆಗ ಇವನ ಅಮ್ಮ ನನ್ನ್ ಗಂಡ ನೀರೊಳಗೆ ಬಿದ್ದೊತಲ್ಲಂತ ಜೋರಾಗಿ ಮರಟತ್. ಆಗ ಮಂಞ್ಞ ಹೇಳ್ತ್ ಅಮ್ಮ ಎಂತಕಮ್ಮ ಮರ್‌ಟೆಯ ನಾಳೆ ಬೆಳ್ಗೆ ನೀರ್ ಹಿಡಿಯಕಾಕನ ಅಪ್ಪ ಟ್ಯಾಪ್‌ಲಿ ಬಂದ ಅಂತ ಹೇಳ್ತ್.

**ಕಡಂಬಳ ಮಾಸ್ಟರ್ ಮೋಹನ್,** ಗಾಳಿಬೀಡು.

## ಉರಿ ಮುಸುಂಡಿಗೊಂದು ಮಂದಹಾಸ

ಒಬ್ಬ ಪೆದ್ದ ಮೊದ್ಲ ಸಲ ಸಿನೆಮಾಗೆ ಹೋತು, ಸಿನಿಮಾ ಅರ್ಥ ಆಗೊತ್ತಿಗೆ ಅವಂಗೆ ಎರಡ ಬಂದ್ ತಡೆಯಕ್ಕೆ ಆತ್ಲೆ. ಎದ್ದ್ ಹೋಕೂ ಅಲ್ಲ, ಸಿನೆಮಾ ನೋಡಕೂ ಅಲ್ಲದ ತರ ಆಗಿಬುಟ್ಟಿತ್ ಅವ್ನ ಅವಸ್ಥೆ. ಹೀಂಗೇ ಇರೋತ್ತಿಗೆ ಪರದೆ ಮೇಲೆ ದೊಡ್ಡ ಹೊಳೆದ್ದ್ ಸೀನ್ ಬಾತ್. ಪೆದ್ದಂಗೆ ನೋಡಿ ಖುಷಿನೇ ಖುಷಿ ಆದ್ರೆ ಎಂಥ ಮಾಡ್ದು, ಸುಡ್ಗಾಡೊವು ಇಬ್ಬರು (ಹೀರೋ ಹೀರೋಯಿನ್) ಮಿಯತ್ತಾ ಒಳೊ.

ಅವರಿಬ್ಬರ್ದ್ ಮೀದ್ ಎಲ್ಲಾ ಆತ್, ಇನ್ನೇನ್ ದಡಕೆ ಕಾಲಿಟ್ಟೊ ತೇಳೊತ್ತಿಗೆ, ಪರ್ದೆ ಮುಂದೆ ಮೊದ್ಲ ಲೈನ್‌ಲಿ ಕುದ್ದ್‌ಕಂಡ್ ಇದ್ದ ಪೆದ್ದ ಹಾರ್ದೇ ಸೀದಾ ಹೊಳೆಗೆ, ಅಂದ್ರೆ ಪರದೆ ಮೇಲೆ !

* * *

ಗಿರಾಕಿ : ಕಾಫಿ ಒಳ್ಳೆ ತೋಡು ನೀರ್‌ತರ ಉಟ್ಟಲ್ಲಾ ?

ಹೋಟೆಲ್ ಮಾಲೀಕ : ಬರೀ ತೋಡು ನೀರ್ ತೇಳ್ಬಡಿ, ಮಳ್ಗಾಲದ್ ತೋಡು ನೀರ್ ತೇಳಿ !

● ಕೋಟೆಮನೆ ಮನೋಹರ ಶಿವಯ್ಯ

## ತಾಬೆದಾರಿಕೆ

ಕಾಲೇಜ್ ಗೂಡೆಗ ಸುರಾಲ್ ಹಾಕಿ
ಕಣ್ಣ್‌ಗೆ ಕಪ್ಪು ಕನ್ನಡಿ ಮಡ್‌ಗಿ ।
ಹೈದನು ಗೂಡೆನು ಕೈ ಕೈ ಹಿಡ್ದ್
ಸಿನೇಮಾಕ್ಕೆ ಹೋದು ಲೋಲುಗಾರಿಕೆ. ॥

ಹಣಗಾರಂತ್ಲ ಲೊಟ್ಟಾಸ್ ಬುಟ್ಟ್
ಸಲಾಂ ಕೇಳುದು ದರ್ಪಗಾರಿಕೆ ।
ಅನ್ನ ನೀರ್ ಕೊಟ್ಟ್ ಪುಣ್ಯ ಪಡ್ದರೆ
ಅಳಿಯ ಸಿಕ್ಕುದುಂತ ಡಂಭಗಾರಿಕೆ. ॥

ಮಿಣ್‌ಪುಳಿ ಬೆಳ್‌ಕ್‌ಂದ ಬೆಳಗಾತೇಳ್ದ್
ಮಿಣ್‌ಪುಳಿಗೊಂದು ಹುಚ್ಚುಗಾರಿಕೆ ।
ಊರೆಲ್ಲ ಸುತ್ತಿ ಬಡಾಯಿ ಕೊಚ್ಚುವ
ಮೂಢ ಮನುಷ್ಯನ ಬಂಡಗಾರಿಕೆ. ॥

ಹುಟ್ಟುಮಾತ್‌ನ ಗಟ್ಟಿಯಾಗಿ ಆಡಿಕೆ
ಬೇಡಪ್ಪ ಯಾರ ತಾಬೆದಾರಿಕೆ ।
ನಮ್ಮದೆಲ್ಲಾ ಭಾಷೆ ಅರೆಭಾಷೆ ತೇಳಿ
ಕನ್ನಡ ನಾಡಿನ ಹಳೆಭಾಷೆ. ॥

ಹುಟ್ಟಿದ್ ಕನ್ನಡ, ಬೆಳ್‌ದದ್ ಕನ್ನಡ
ಸಾಯುದು ಕನ್ನಡ ನಾಡ್‌ಲೇ ।
ಹುಟ್ಟಿಕೆ ಸಾಯುಕೆ ಅಪ್ಪಣೆ ಬೇಡ
ಬೇಡಪ್ಪಾ ಯಾರಾ ತಾಬೆದಾರಿಕೆ. ॥

ಅವ್ವನ ಅಪ್ಪನ ಗ್ಯಾನ್ನ ಮಾಡ್ದಂಗೆ
ದೇಶನ ಭಾಷೆನ ಮರೆಬ್ಯಾಡ ।
ಕುಲಗುರು ನಮ್ಮ ವೆಂಕಟೇಶನ
ಯಾಗಲೂ ನೀನ್ ಮರೆಬ್ಯಾಡ. ॥

ಹೂಡಿಕೆ ಮುಹೂರ್ತ ಮಾಡಕು ತೇಳಿ
ಹೂಡೊವು ಎಲ್ಲಾ ಒಟ್ಟಾಗಿ ಕೂಡಿ ।
ಬಿಸು ಹಬ್ಬಲಿ ಎತ್ತ್ ಕಟ್ಟುದು
ನಮ್‌ಗೆಲ್ಲ ಇರುವ ರೈತಗಾರಿಕೆ. ॥

● ಕೂಡಕಂಡಿ ಎ. ಪೊನ್ನಪ್ಪ
ವಕೀಲರು, ಮಡಿಕೇರಿ.

## ಯಾಕೆ ಮಾಡಿಯ ಚಿಂತೆ

ಯಾಕೆ ಮಾಡಿಯ ಚಿಂತೆ ಕೂಸ್ ಹೆಣ್ಣಾತ್‌ಂತ
ಯಾಕೆ ಪಟ್ಟಿಯ ನೀನ್ ಅಷ್ಟು ದುಃಖ ।
ಗಂಡ್‌ಗಿರುವ ಧೈರ್ಯ ಹೆಣ್ಣಿಗೂ ಇರಿಕುಟ್ಟು
ನಿನ್ನ ಮನೊಳಗಿದ್ರ್ ತೊಪ್ಪು ಲೆಕ್ಕ ॥

ದೇಶನೆ ಇಂದುಂಟ್ಟು ಹೆಣ್ಣ್ ಜನರಾ ಕೈಲಿ
ಯಾಕೆ ಗೊತ್ತಲೆ ನಿಂಗೆ ನಿಮ್ಮ ತೂಕ ।
ಗಂಡ್ ಹೆಣ್ಣ್‌ಂತಿರುವ ಭೇದ ಬುಟ್ಟರೆ ಬೊದ್‌ಕ್
ಆದಲ್ಲಿ ಕಂಡಿತಾ ಸಕ್ಕರೆನ ಪಾಕ ॥

ಅತೀ ತಾಳ್ಮೆ ವಿನಯತೆ ಹೆಣ್ಣ್‌ಗೆನೆ ಬಂದ ಗುಣ
ಹುಟ್ಟ್‌ಂದಳೆ ಹೆಣ್ಣ್ ಕುಲದ ಜನಕೆ ।
ಹೆಣ್ಣ್ ಕಣ್ಣಾಗಿದ್ರ್ ಕುಲಕೋಟಿ ಜನಕ್ಕೆಲ್ಲ
ಜನ್ಮ ಕೊಡುವಾ ಪುಣ್ಯ ಹೆಣ್ಣೆ ಜಗಕೆ ॥

ಎಲ್ಲ ಪದವಿಲೂ ಹೆಣ್ಣೆ, ಮನೆ ಏಳಿಗೆಗೂ ಹೆಣ್ಣೆ,
ಮಕ್ಕಳೇಳಿಗೆಗೂ ಹೆಣ್ಣೆ ಅಲ್ಲೊ ಹೇಳಿ
ನಿಮ್ಮ ಘನತೆಲಿ ನೀವು ಯಾರಿಗೂ ಕಮ್ಮಿಲ್ಲೆ
ಹೆಣ್ಣ್‌ಗಳ ಸಾಹಸದ ಕಥೆನ ಕೇಳಿ ॥

ರಾಣಿ ಚೆನ್ನಮ್ಮನೂ ಒನ್ಕೆ ಓಬವ್ವನೂ
ಧೀರೆ ಅಬ್ಬಕ್ಕನೂ ಎಲ್ಲ ಹೆಣ್ಣೆ ।
ಅಂದ್ ಮಾಡ್‌ದ ಅವರ ಸಾಹಸದ ಕಥೆ ಕೇಳಿ
ನಾರಿಯರಿಗಿರೊಕಿಂದ್ ಬಾರಿ ಹೆಮ್ಮೆ ॥

ವೈರಿಗಳ ಜತೆ ಹೆಣ್ಣ್ ವೈರತ್ವ ಇಸಿಕಂಡ್
ಧೈರ್ಯಲೆ ಸತ್ತೊಳವು ಮಾಡಿ ಸಮರ ।
ಅಂತವರ ಆ ದೊಡ್ಡ ಸಾಹಸದ ಕಥೆಗೆಲ್ಲ
ನಾಡುದ್ದ ನಿಂತುಟದ್ ಆಗಿ ಅಮರ ॥

ಬಿಲಿದರದ್ ನಾರೀಂತ ಮುನಿದರದ್ ಮಾರೀಂತ
ಇಕ್ಕಡೆಲೆನೂ ಉಟ್ಟು ಅವುಕೆ ಕೀರ್ತಿ ।
ಚಿಂತೆ ಮಾಡ್ಬಡ ನೀನ್ ಕೂಸ್ ಹೆಣ್ಣಾತ್‌ಂತ
ಈ ಪದ್ಯ ನೀವ್ಗೆಲ್ಲ, ತರಲಿ ಸ್ಫೂರ್ತಿ ॥

○ ಹೊದ್ದೆಟ ಭವಾನಿಶಂಕರ್
ಬೆಂಗಳೂರು

## ಐ ಲವ್ ಯೂ

ನಿಜಾ. ನಾ ಹಿಂಗೆ ಹೇಳ್ಕನ ನೀವ್ಗೆ ಆಶ್ಚರ್ಯ ಆದು ಅಲ್ಲಾ ? ನಂಗೆ ನೀವು, ನಿಮ್ಮ ಸಮಾಜ, ನಿಮ್ಮ ಭಾಸೇತ ಹೇಳ್ರಿ ಅಷ್ಟೊಂದು ಇಷ್ಟ ಗೊತ್ತುಟ್ಟಾ ?

ಸರಿಯಾಗಿ ನೋಡಿಕೆ ಹೋದರೆ ನನ್ನ ಸೃಷ್ಟಿಯೇ ನಿಮ್ಮ ಮೇಲಿನ ಅಭಿಮಾನ ದಿಂದ ಆದ್. ನಾ ನಿಮ್ಮ ಮನೆಗೆ ಬಾಕೆ ಇಷ್ಟ ಪಟ್ಟೆ. ಕರ್ಕಂಡ್ ಹೋದಿ ಯರಿ ತಾನೆ ? ಕರ್ಕಂಡ್ ಹೋಕೆ ಮೊದ್ಲು ನಂಗೊಂಚೂರು ಮರ್ಯಾದಿ ಕೊಟ್ರೆ ಸಾಕ್. ಮತ್ತೆ ಯಾವ ಉಪ ಚಾರನೂ ಮಾಡೊಕೊಂತಿಲ್ಲೆ.

ನಂಗೆ ಮತ್ತೆ, ಅಂವ-ಇವಂತ ಇಲ್ಲೆ. ನಾವೆಲ್ಲೂ ಒಂದೇತ ನನ್ನ ಭಾವನೆ ಯಾರ್ ಕರ್ದರೂ ಬನ್ನೆ. ಹಳ್ಳಿಯಾದ್ರೂ ಸರಿ, ದಿಲ್ಲಿಯಾದ್ರೂ ಸರಿ. ನಂಗೆ ಮಾತಾಡ್ವ ಅಭ್ಯಾಸ ಸ್ವಲ್ಪ ಜಾಸ್ತಿ ಉಟ್ಟು. ಆದ್ರೆ ನೀವ್ಗೆ ಬೇಜಾರ್ ಮಾಡ್ದುಲೇತ ಗ್ಯಾರಂಟಿ ಕೊಟ್ನೆ, ಸಾಕಾ?

ನಾನ್ ಟೂರ್ ಹೊರ್ಡ್ದು ಹದಿನೈದ್ ದಿನಕ್ಕೊಮ್ಮೆ ಆತಾ ? ನನ್ನ ಎಷ್ಟ್ ಜನ ಎಲ್ಲಿಗೆಲ್ಲಾ ಕರ್ದರೂ ನಂಗೆ ಹೋಕೆ ಆದ್ದೆ. ಅದೆಂಗೇತ ಅಲ್ಲ ನಿಮ್ಮ ಸಂಶಯ? ಈಗಿನ ವಿಜ್ಞಾನಿಗ ಕ್ಲೋನಿಂಗ್ತ ಏನೆಲ್ಲ ಮಾಡಿವೆ ನೋಡಿ, ಹಂಗೇ, ನನ್ನಂತವೇ ತುಂಬಾ ಸಂಖ್ಯೆಲಿ ಹೊರ್ಡ್ದು ನಿಜ ಹೇಳ್ಬೇಕಾದ್ರೆ, ನಮ್ಮ ಪೇಟೆಗೆ ನಾವು ಹೊರ್ಟ್ಟ ನಿಮ್ಮನೇ ಕಾದಕಂಡ್ ಇದ್ದವೆ.

ನನ್ನ ಬಗ್ಗೆ ಗೊತಿಲ್ಲದವ್ಕೆ ನೀವು ಹೇಳೋಕು. ನನ್ನ ಆಸೆ ಪ್ರತಿಯೊಬ್ಬರ ಗೌಡರ ಮನೆಲಿಯೂ ನಾನಿರೊಕು ಮತ್ತೆ ನನ್ನ ಪ್ರೀತಿ ಮಾಡ್ವ ಬೇರೆ ಕಡೆಸನ ಇದ್ದೇ ಇರೂಕೂಂತ.

ನನ್ನ ದೊಡ್ಡದ್ ಮಾಡಿ, ಇನ್ನೂ ಬುದ್ಧಿವಂತ ಮಾಡಿ, ನನ್ನಿಂದ ಹೆಚ್ಚೆಚ್ಚಿನ ಪ್ರಯೋಜನಪಡಿವ ಜವಾಬ್ದಾರಿ ನಿಮ್ಮದ್

ಇಂತು ನಿಮ್ಮ ಪ್ರೀತಿಸುವ,

**"ಕೊಡಗು ಸಂಗಾತಿ"**

**ಎ.ಕೆ. ಚಂದ್ರಶೇಖರ್ ಭಟ್,**

ಭಾಗಮಂಡಲ.

## ಹಲಸಿನ ಕಾಯಿದ್ ಹಪ್ಪಳ

ಈಗ ಮಳೆಗಾಲ ಸುರು ಆತ್ ಕಾಡ್‌ಲಿ ತೋಟಲಿ, ಹಲ್‌ಸಿನ ಕಾಯಿಗ ಬೆಳೆಯುವ ಸಮಯ. ಮಳೆ ಗಾಲಲಿ ಊಟ ಮಾಡ್ಕನ ಅನ್ನದ ಒಟ್ಟಿಗೆ ಹಪ್ಪಳ ಇದರೆ ಒಂದು ಬಾಯಿ ಅನ್ನಜಾಸ್ತಿ ಊಟ ಮಾಡಕ್. ಅದಕೆ ನೀವು ಸ್ವಲ್ಪ ಹಲಸಿನ ಹಪ್ಪಳ ಮಾಡಿಮಡಕಣಿ.

ಒಳ್ಳೆ ಬೆಳ್‌ದ ಹಲಸ್‌ನಕಾಯಿನ ತಂದ್ ಅದರ ಮೇಲೆ ಇರುವ ಮುಳ್ಳುಗಳ್‌ನೆಲ್ಲ ದಪ್ಪಲಿ ಕೆತ್ತಿ ತೆಗ್‌ದ್, ತೊಳೆ ಗಳ್‌ನ ಬಿಡ್‌ಸಿಕಂಡ್ ಬೀಜ ಎಲ್ಲಾ ತೆಗಿಯೋಕು. ತೊಳೆಗಳನ್ನ ಕಳ್‌ಸಿಗೆಲಿ ಬೇಯಿಸೋಕು. ಮತ್ತೆ ಅದನ್ನ ಇಳ್‌ಸಿಕಂಡ್, ರುಚಿಗೆ ತಕ್ಕಷ್ಟ್ ಉಪ್ಪು, ಮೆಣ್‌ಸ್ ಮತ್ತೆ ಸ್ವಲ್ಪ ಜೀರಿಗೆ ಹುರ್‌ದ್ ಹಾಕಂಡ್ ಕಡೆಕಲ್‌ಲ್ಲಿ ಒಳ್ಳೆ ಸಣ್ಣಾಗುವವರೆಗೆ ಕುಟ್ಟಕು. ಆಗ ಎಲ್ಲಾ ಮುದ್ದೆ ಮುದ್ದೆ ಹಂಗೆ ಆದೆ. ಆ ಮುದ್ದೆನ ಲಾಯ್ಕ ಕಲ್ಸಿಕಂಡ್ ಸಣ್ಣ ಸಣ್ಣ ಉಂಡೆ ಮಾಡಿ ಕೊಣಕು, ರೊಟ್ಟಿ ಮಾಡುವ ಮುಕ್ಕಾಲ್ ಮ್ಯಾಲೆ ಇಲ್ಲೆ ರೊಟ್ಟಿ ಮಿಷನ್‌ನ ಒಳಗೆ ಬಾಳಲೆ ಇಲ್ಲದಿದ್ದರೆ ಪ್ಲಾಸ್ಟಿಕ್ ಹಾಕಿ ಕಂಡ್ ಅದರ ಮ್ಯಾಲೆ ಹನಿ ಎಣ್ಣೆ ಸವರಿಕಂಡ್ ಆ ಸಣ್ಣ ಉಂಡೆನ ಇಟ್ಟ್ ತೆಳ್ಳಗೆ ಆಗುವಂಗೆ ಒತ್ತ್ಕು. ಹಂಗೆ ಒಂದೊಂದೆ ಮಾಡಿ ಮೊರ ಇಲ್ಲೆ ದೊಡ್ಡ ತಟ್ಟೆಗಳಲ್ಲಿ ಹಾಕಿ ಬಿಸಿಲಿಗೆ ಅಲ್ಲದಿದ್ದರೆ ಬೆಸಗೆ ಮ್ಯಾಲೆ ಮಡಗಿ ಲಾಯ್ಕ್ ಒಣಗ್‌ಸೋಕು. ಒಣಗಿದ ಮ್ಯಾಲೆ ದೊಡ್ಡ ಮಡಿಕೆಗೆ ಹಾಕಿ ಬಾಯಿಕಟ್ಟಿ ಇಟ್ಟ್‌ಕೊಣಕು. ನಮಗೆ ಬೇಕಾಕನ ತೆಗ್‌ದ್ ಬಾಣೆಲೆಲ್ಲಿ ಎಣ್ಣೆ ಹಾಕಿ ಒಂದೊಂದೆ ಹುರ್‌ಕಂಡರೆ ಮಳೆಗಾಲಲಿ ಊಟ ಸೇರದೆ ಇರ್‌ಕಾಕನ ತಕ್ಕಣೆ ಹಲಸಿನ ಕಾಯಿದ್ ಹಪ್ಪಳ ಸಿಕ್ಕಿಬುಟ್ಟರೆ ಎಷ್ಟ್ ಲಾಯಕತಾ. ಒಂದು ಬಾಯಿ ಅನ್ನ ಹೆಚ್ಚಿಗೆ ಸೇರ್‌ದೆ.

● **ಉಳುವಾರನ ಹರಿಣಿ ಪಳಂಗಪ್ಪ,**
**ಕಾಂತೂರು, ಮಡಿಕೇರಿ.**

## ಗಾದೆ ಮಾತು

1. ಒಬ್ಬರಿಗಿಂತ ಇಬ್ಬರು ಮೇಲು.
2. ಅಜ್ಜಿ ನೂತದ್ದೆಲ್ಲ ಅಜ್ಜನ ಉಡೆದಾರಕ್ಕೆ.
3. ಅಲ್ಪರ ಸಂಗ ಅಭಿಮಾನ ಭಂಗ
4. ಉಪವಾಸವಿದ್ದರೂ ಉಪದ್ರವಿರಬಾರದು.

● **ಅಚ್ಚಲ್ಪಾಡಿ ಬೀನ ಗೋಪಾಲ, ಗದ್ದಿಗೆ.**

# ಗೌಡ ಸಮಾಜ
# ಪಿರಿಯಾಪಟ್ಟಣ ತಾಲ್ಲೋಕು

ರಿ.ನಂ. 162/1989-90. ತಾ|| 23-3-1990

**ಗೋಣಿಕೊಪ್ಪ ರಸ್ತೆ, ರಾಜಪುರ, ಪಿರಿಯಾಪಟ್ಟಣ.**

ಅಧ್ಯಕ್ಷರು : **ಶ್ರೀ ಚೆಟ್ಟಿಮಾಡ ಟಿ. ಬಸಪ್ಪ**

ಉಪಾಧ್ಯಕ್ಷರು : ಶ್ರೀ ತೋಟಂಬೈಲು ಟಿ. ಪ್ರಭಾಕರ್

ಸೆಕ್ರೆಟರಿ : ಶ್ರೀ ಕೂಡಕಂಡಿ ಕೆ. ಬಾಲಕೃಷ್ಣ

ಖಜಾಂಚಿ : ಶ್ರೀ ಕೊಕ್ಕಲೇರ ಕೆ. ಪೂವಯ್ಯ

ನಿರ್ದೇಶಕರು : ಶ್ರೀ ಮುಂಡೋಡಿ ಸಿ. ದೇವಯ್ಯ

ಶ್ರೀ ಸೋಮೋಟ ಪಿ. ದೇವಯ್ಯ

ಶ್ರೀ ಕುಯ್ಯಮುಡಿ ಜಿ. ಮುತ್ತಣ್ಣ

ಶ್ರೀ ಮೋಡತ್ತನ ಎಲ್. ತಿಮ್ಮಯ್ಯ

ಶ್ರೀ ಮೋಡತ್ತನ ಎಲ್. ಶಿವಾಜಿ

ಶ್ರೀ ಪಾಡಿಯನ ಟಿ. ಗಣಪತಿ

ಶ್ರೀಮತಿ ಪೂಜಾರಿರ ಧರ್ಮಾವತಿ ನಾಣಯ್ಯ

ಶ್ರೀಮತಿ ಮೋಡತ್ತನ ಸುಶೀಲಾ ಸುಬ್ಬಯ್ಯ

ಶ್ರೀ ಕೆರೆಮನೆ ಟಿ. ಅಪ್ಪಚ್ಚು

ಶ್ರೀ ಸೆಟ್ಟೆಜನ ಕಾರ್ಯಪ್ಪ

ಶ್ರೀ ನಿರ್ವಾಣಿ ಗೋಪಾಲ

ಶ್ರೀ ಪೆಮ್ಮಟೆ ಎಂ. ಪಾಲಾಕ್ಷ

ಶ್ರೀ ಕುಯ್ಯಮುಡಿ ಎಸ್. ಪೊನ್ನಪ್ಪ

ಶ್ರೀ ಕೊರಂಬಡ್ಕ ಆರ್. ಬಿದ್ದಪ್ಪ

ಶ್ರೀ ಹುದೇರಿ ಸಿ. ಸೋಮಣ್ಣ

ಶ್ರೀ ನಿಡ್ಯಮಲೆ ಕೃಷ್ಣಪ್ಪ

ಶ್ರೀ ಪಳಂಗೋಟು ಎಂ. ಶೇಖರ್

K.R.N.N. 240

# Little Flowers English High School

ಲಿಟಲ್ ಫ್ಲವರ್ಸ್ ಇಂಗ್ಲೀಷ್ ಹೈಸ್ಕೂಲ್

(Registered by Government of Karnataka)

**16th 'B' Main, HAL II Stage, Bangalore-560 008.**

**MANAGED BY THE**

## B. B. Educational Society (Regd.)

(Nangaru Appanna Somappa Memorial School)



Founder - President

**Nagaru Somappa Ramaiah**
**Ph : 3441078**

Secretary

**Moolemajalu**
**Chinnappa Devaiah**

Printed by M.K. Thammaiah and Published by Kodagu Sangathi on behalf of Pattada P. Sheelamaniand Printed at ASHIRWAD PRINTERS, 180/A, 6th Main, Vinayakanagar, Mysore-12. Editor PATTADA. P. SHEELAMANI, 322, Bhogadi Circle, Hinkal Post, Mysore-570017.